



# ಹೊಂಗನಸು




ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 76

ಸಂಪುಟ: ೦೯ ಸಂಚಿಕೆ: ೯ | ಜನವರಿ ೨೦೨೨ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/- | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್

Vol. 09 Issue: 9 | January 2022 | Pages - 8 | A. Sub. - Rs. 20/- | Editor : Sri. B.R. Ravindranath





**ಚಂದಾ ವಿವರಗಳು**
ವಾರ್ಷಿಕ ಚಂದಾ : ರೂ. ೨೦/-
ಐದು ವರ್ಷಗಳ ಚಂದಾ : ರೂ. ೧೦೦/-



ಬಿ.ಎಂ.ಶ್ರೀ. ಪ್ರತಿಷ್ಠಾನ
ಸ್ಥಾಪನೆ : ೦೬-೦೫-೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಪ್ರತಿಷ್ಠಾನದ ರಸ್ತೆ,
೩ನೇ ಮುಖ್ಯರಸ್ತೆ,
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ :೨೬೬೧೫೮೭೭
ಇಮೇಲ್ : bmsritrust@gmail.com
web: www.bmshri.org
ಕಛೇರಿ ಸಮಯ:
ಬೆಳಗ್ಗೆ 10–30ರಿಂದ ಸಂಜೆ 5–00ಗಂಟೆ.
ವಾರದ ರಜೆ : ಮಂಗಳವಾರ


## ಹೊಂಗನಸು ಓದುಗರಿಗೆ ನೂತನ ವರ್ಷದ ಶುಭಾಶಯಗಳು–೨೦೨೨

೦೮.೧೨.೨೦೨೧

### ಬೌದ್ಧ ಮತ್ತು ಜೈನ ಸಾಹಿತ್ಯಕ್ಕೆ ಜಿ.ಪಿ.ರಾಜರತ್ನಂ ಅವರ ಕೊಡುಗೆ

ಬಿಎಂಶ್ರೀ ಪ್ರತಿಷ್ಠಾನವು ವಿ.ಸೀತಾರಾಮಯ್ಯ, ಶಾಂತಾ ಪ್ರಭುಶಂಕರ, ವೆಂಕಟರಂಗಪ್ಪ, ಚಂದ್ರಶೇಖರ ಶರ್ಮ, ಟಿ.ಎನ್.ಮಹಾದೇವಯ್ಯ, ಜಿ.ಪಿ.ರಾಜರತ್ನಂ ಹಾಗೂ ರಾಮಚಂದ್ರ ಪಟವಾರಿ ಬಿ.ಎಂ.ಶ್ರೀಂಕಠಯ್ಯ ಅವರುಗಳ ದತ್ತಿ ಕಾರ್ಯಕ್ರಮದಡಿಯಲ್ಲಿ ಈ ಜಾಲಗೋಷ್ಠಿಯನ್ನು ಆಯೋಜಿಸಲಾಗಿತ್ತು.

ಡಾ.ಎಚ್.ಎಸ್.ಗೋಪಾಲರಾವ್ ಅವರು ಬೌದ್ಧ ಮತ್ತು ಜೈನ ಸಾಹಿತ್ಯಕ್ಕೆ ಜಿ.ಪಿ.ರಾಜರತ್ನಂ ಅವರ ಕೊಡುಗೆಯ ಬಗ್ಗೆ ಉಪನ್ಯಾಸ ನೀಡಿದರು.

ಗುಂಡ್ಲುಪಂಡಿತ ರಾಜರತ್ನಂ ಅವರ ಪರಿಚಯದೊಂದಿಗೆ ತಮ್ಮ ಉಪನ್ಯಾಸವನ್ನು ಪ್ರಾರಂಭಿಸಿದರು. ರಾಜರತ್ನಂ ಮತ್ತು ರಾಶಿಯವರ ನಡುವೆ ಇದ್ದ ಸ್ನೇಹ ಸಂಬಂಧವು ಅಸೂಯೆಯನ್ನು ಹುಟ್ಟಿಸುವಂತಹುದಾಗಿತ್ತು ಎಂದು ಅವರ ಗೆಳೆತನದ ಮಹತ್ವವನ್ನು ವಿವರಿಸಿದರು. ಜಿ.ಪಿ.ರಾಜರತ್ನಂ ಅವರಲ್ಲಿ ಇದ್ದ ಸಹೃದಯತೆ, ಅವರು ಕಾಲಕ್ಕೆ ನೀಡುತ್ತಿದ್ದ ಮಹತ್ವವನ್ನು ಹೇಳಿದರು. ಕನ್ನಡ ಪಂಡಿತರಾಗಿ ಸೇವೆಗೆ ಸೇರಿದ ಶ್ರೀ ಜಿ.ಪಿ.ರಾಜರತ್ನಂ ಅವರು ಪಾಲಿ, ಪ್ರಾಕೃತ ಭಾಷೆಯನ್ನು ಕಲಿತು ಬೌದ್ಧ, ಜೈನ ಕೃತಿಗಳನ್ನು ಕನ್ನಡ ಭಾಷೆಗೆ ಅನುವಾದಿಸುವುದರ ಮೂಲಕ ಕನ್ನಡಿಗರಿಗೆ ಮೂಲ ಜೈನ ಹಾಗೂ ಬೌದ್ಧ ಸಾಹಿತ್ಯದ ರಸಪಾಕವನ್ನು ಉಣಬಡಿಸಿದ್ದನ್ನು ವಿವರಿಸಿದರು. ಅಶೋಕ ಚಕ್ರವರ್ತಿಯ ಕರ್ನಾಟಕದ ಶಾಸನಗಳ ಪರಿಚಯವನ್ನು ಮಾಡಿಕೊಟ್ಟ ಶ್ರೀಯುತರು ಜಿ.ಪಿ. ರಾಜರತ್ನಂ ಅವರು ಪಾರ್ಶ್ವನಾಥನ ಕಥೆಗಳನ್ನು ಕನ್ನಡಕ್ಕೆ ಅನುವಾದಿಸುವ ಮೂಲಕ ಓದುಗರಿಗೆ ಪ್ರಾಕೃತ ಭಾಷೆಯಲ್ಲಿನ ಪಾರ್ಶ್ವನಾಥನ ಕಥೆಗಳು ಲಭ್ಯವಾಗುವಂತೆ ಮಾಡಿದರು. ಮೂಲತಃ ಶ್ರೀ ವೈಷ್ಣವರಾದ ಗುಂಡ್ಲು ಪಂಡಿತ ರಾಜರತ್ನಂ ಅವರ ಬೌದ್ಧ ಹಾಗೂ ಜೈನ ಸಾಹಿತ್ಯದ ಸೇವೆಗಾಗಿ ಅವರನ್ನು ಕೆಲವರು ಬೌದ್ಧ ಧರ್ಮದವರೆಂದು ಹಾಗೂ ಕೆಲವರು ಜೈನ ಧರ್ಮದವರೆಂದು ಕರೆಯುತ್ತಿದ್ದರು. ಪಾಲಿಯ ಬೌದ್ಧ ಧರ್ಮದ ಸಾಹಿತ್ಯ ಹಾಗೂ ಪ್ರಾಕೃತದ ಜೈನ ಸಾಹಿತ್ಯವನ್ನು ಕನ್ನಡೀಕರಿಸುವಲ್ಲಿ ಅವರು ತೋರಿದ ಶ್ರದ್ಧೆಯೇ ಅವರನ್ನು ಈ ರೀತಿ ಓದುಗರು ಭಾವಿಸಲು ಸಾಧ್ಯವಾಯಿತು.

ಜಾಲಗೋಷ್ಠಿಯ ಅಧ್ಯಕ್ಷತೆ ವಹಿಸಿದ್ದ ಡಾ.ಬೈರಮಂಗಲ ರಾಮೇಗೌಡ ಅವರು ಪ್ರಾಸಂಗಿಕವಾಗಿ ಮಾತನಾಡಿ ಉಪನ್ಯಾಸಕರಾದ ಡಾ. ಎಚ್.ಎಸ್. ಗೋಪಾಲರಾವ್ ಮತ್ತು ಜಿ.ಪಿ.ರಾಜರತ್ನಂ ಅವರ ಸಾಹಿತ್ಯ ಸೇವೆಯನ್ನು ಪರಿಚಯಿಸಿದರು. ಉಪನ್ಯಾಸಕರು, ನೇರವಾಗಿ ಹಾಗೂ ಜಾಲತಾಣದ ಮೂಲಕ ಕಾರ್ಯಕ್ರಮದಲ್ಲಿ ಭಾಗವಹಿಸಿದವರನ್ನು ಡಾ.ಬಿ.ಸಿ.ರಾಜಕುಮಾರ್ ಅವರು ಸ್ವಾಗತಿಸಿದರು ಹಾಗೂ ಕಾರ್ಯಕ್ರಮ ನಿರ್ವಹಣೆಯೊಂದಿಗೆ ವಂದನಾರ್ಪಣೆಯನ್ನು ಮಾಡಿದರು.

### ಬಾನುಲಿಯಲ್ಲಿ ಬಿಎಂಶ್ರೀ ಪ್ರತಿಷ್ಠಾನದ ಪರಿಚಯ




೨೦೨೧ರ ನವೆಂಬರ್ ತಿಂಗಳಿನಲ್ಲಿ ಕನ್ನಡ ರಾಜ್ಯೋತ್ಸವದ ಅಂಗವಾಗಿ ಕನ್ನಡಕ್ಕಾಗಿ ಶ್ರಮಿಸುತ್ತಿರುವ ಸಂಸ್ಥೆಗಳನ್ನು ಗುರುತಿಸಿ ಅವುಗಳ ಪರಿಚಯ ಮಾಡಿಕೊಡುವ ಕಾರ್ಯಕ್ರಮವನ್ನು ಬೆಂಗಳೂರಿನ ಆಕಾಶವಾಣಿಯು ಹಮ್ಮಿಕೊಂಡಿತ್ತು. ಅದರಡಿಯಲ್ಲಿ ಬಿಎಂಶ್ರೀ ಪ್ರತಿಷ್ಠಾನದ ಪರಿಚಯವನ್ನು ಮಾಡಿಕೊಡಲು ಹೊಂಗನಸು ಸಂಪಾದಕ ಶ್ರೀ ರವೀಂದ್ರನಾಥ್ ಹಾಗೂ ಕೋಶಾಧಿಕಾರಿ ಡಾ. ಅನಿಲ್ ಕುಮಾರ್ ಅವರ ಸಂದರ್ಶನವನ್ನು ಆಕಾಶವಾಣಿಯ ಶ್ರೀ ಎಸ್ ಆರ್. ಭಟ್ ಅವರು ನಡೆಸಿದರು. ಈ ಪರಿಚಯಾತ್ಮಕ ಸಂದರ್ಶನವನ್ನು ದಿನಾಂಕ ೯ನೇ ನವೆಂಬರ್ ೨೦೨೧ ರಂದು ಹಾಗೂ ೧೬ನೇ ನವೆಂಬರ್ ೨೦೨೧ ರಂದು ಎರಡು ಭಾಗಗಳಲ್ಲಿ ಬಿತ್ತರಿಸಲಾಯಿತು. ಈ ಕಾರ್ಯಕ್ರಮಕ್ಕೆ ಬಹಳಷ್ಟು ಸಕಾರಾತ್ಮಕ ಪ್ರತಿಕ್ರಿಯೆಗಳು ಬಂದಿರುತ್ತವೆ. ಆಕಾಶವಾಣಿಯ ಯೂಟ್ಯೂಬ್ ಚಾನಲ್ ನಲ್ಲಿ ಈ ಸಂದರ್ಶನವನ್ನು ಆಲಿಸಬಹುದು.

## ಸಂಪಾದಕೀಯ

ಹೊಸ ಕ್ಯಾಲೆಂಡರ್ ಬಂದಿದೆ. ವರ್ಷದ ಆರಂಭದಲ್ಲಿ ಹೊಸ ವರ್ಷದಲ್ಲಿ ಏನೆಲ್ಲ ಸಾಧನೆಗಳನ್ನು ಮಾಡಬೇಕೆಂಬ ಯೋಜನೆಗಳನ್ನು ರೂಪಿಸುವ ಉತ್ಸಾಹ. ಕಳೆದ ವರ್ಷದ ಆರಂಭದಲ್ಲಿ ರೂಪಿಸಿದ ಯೋಜನೆಗಳ ಪೈಕಿ ಬಹಳಷ್ಟನ್ನು ಕೈ ಬಿಟ್ಟಿದ್ದರೂ ಈ ವರ್ಷ ವಿಭಿನ್ನವಾಗಿರಬಹುದು ಎಂಬ ಆಸೆಗಳನ್ನು ತೋರಿಸುತ್ತಿರುವ ಕ್ರಿ.ಶ. ೨೦೨೨ ನಮ್ಮ ಮುಂದಿದೆ.

ನಮ್ಮ ಉತ್ಸಾಹಗಳಿಗೆ ತಣ್ಣೀರು ಎರಚಲು ಕಾದುಕುಳಿತಿರುವಂತೆ ಇರುವ ಅಡ್ಡಿ ಆತಂಕಗಳು ಕಡಿಮೆ ಏನಿಲ್ಲ. ಹಿಂದಿನ ವರ್ಷದಲ್ಲಿ ಕಂಡಷ್ಟು ಸುಖಶಾಂತಿಗಳನ್ನೂ ಹೊಸ ವರ್ಷದಲ್ಲಿ ಕಾಣುತ್ತೇವೋ ಇಲ್ಲವೋ ಎಂಬ ಅನಿಸಿಕೆಗಳು ಬಂದಲ್ಲಿ ಆಶ್ಚರ್ಯವಿಲ್ಲ.

ಬಿ.ಎಂ.ಶ್ರೀ. ಪ್ರತಿಷ್ಠಾನದ ಮಟ್ಟಿಗೆ ಹೇಳುವುದಾದರೆ ೨೦೨೨ರಲ್ಲಿ ಸಾಕಷ್ಟು ಸಕಾರಾತ್ಮಕ ಬೆಳವಣಿಗೆಗಳನ್ನು ನಾವು ಕಾಣುತ್ತೇವೆ ಎಂಬ ಭರವಸೆ ಇದೆ. ಕಾರ್ಯಕಾರಿ ಸಮಿತಿಯಲ್ಲಿ ನೂತನವಾಗಿ ಚುನಾಯಿತರಾಗಿರುವ ಸದಸ್ಯರು ವಿವಿಧ ರೀತಿಯ ಸಾಧನೆಗಳು ಹಾಗೂ ಅನುಭವಗಳ ಜೊತೆ ಬಂದಿದ್ದಾರೆ. ಪ್ರತಿಷ್ಠಾನದ ಸದಸ್ಯರು ಮತ್ತು ಅಭಿಮಾನಿಗಳು ೨೦೨೨ರ ಸಾಲಿನಲ್ಲಿ ಹಲವು ಹೊಸತುಗಳನ್ನು ಕಾಣುವ ನಿರೀಕ್ಷೆ ಇಟ್ಟುಕೊಳ್ಳಬಹುದು.

**ಸಮಸ್ತ ಸನ್ಮಂಗಳಾನಿ ಭವಂತು**

**– ಬಿ.ಆರ್. ರವೀಂದ್ರನಾಥ್**

## ಪ್ರಕಟಣೆ

### ಶ್ರೀ ಕೆ. ಮೋಹನ್ ದೇವ್ ಆಳ್ವ – ಡಾ.ಎಂ.ಕೆ. ಶೈಲಜ ಆಳ್ವ ದತ್ತಿ ದೇಶಭಕ್ತಿ ಗೀತೆ ಸ್ಪರ್ಧೆ

ಶ್ರೀ ಕೆ. ಮೋಹನ್ ದೇವ್ ಆಳ್ವ– ಡಾ.ಎಂ.ಕೆ. ಶೈಲಜ ಆಳ್ವ ದತ್ತಿಯ ವತಿಯಿಂದ ಬಿ.ಎಂ.ಶ್ರೀ. ಪ್ರತಿಷ್ಠಾನವು ಕಿರಿಯರ ವಿಭಾಗ ೬ ರಿಂದ ೧೩ ವರ್ಷ ಮತ್ತು ಹಿರಿಯರ ವಿಭಾಗ ೧೪ ರಿಂದ ೧೮ ವರ್ಷ ವಯಸ್ಸಿನವರಿಗೆ 'ದೇಶಭಕ್ತಿ ಗೀತೆ ಸ್ಪರ್ಧೆ' ಯನ್ನು ಏರ್ಪಡಿಸಿದೆ. ಈ ಸ್ಪರ್ಧೆಯಲ್ಲಿ ಪಾಲ್ಗೊಳ್ಳಲು ಬಯಸುವವರು ದಿನಾಂಕ: ೧೬–೦೧–೨೦೨೨ರೊಳಗೆ ಬಿ.ಎಂ.ಶ್ರೀ. ಪ್ರತಿಷ್ಠಾನದ ಕಛೇರಿಯಲ್ಲಿ ಹೆಸರನ್ನು ನೋಂದಾಯಿಸಿಕೊಳ್ಳಬೇಕು. ದಿನಾಂಕ : ೨೩–೦೧–೨೦೨೨, ಭಾನುವಾರ ಬೆಳಗ್ಗೆ ೧೦–೩೦ಗಂಟೆಗೆ ಆರಂಭಗೊಳ್ಳುವ ಸ್ಪರ್ಧೆಯಲ್ಲಿ ವಿಜೇತರಾದವರಿಗೆ ನಗದು ಬಹುಮಾನಗಳನ್ನು ಮತ್ತು ಪ್ರಶಸ್ತಿಪತ್ರಗಳನ್ನು ನೀಡಲಾಗುವುದು. ಸ್ಪರ್ಧೆಯಲ್ಲಿ ಭಾಗವಹಿಸಿದ ಎಲ್ಲ ಸ್ಪರ್ಧಿಗಳಿಗೂ ಪ್ರಮಾಣ ಪತ್ರಗಳನ್ನು ನೀಡಲಾಗುವುದು.

**ದೂರವಾಣಿ : ೦೮೦–೨೬೬೧೩೮೭೭, ೯೯೭೨೮೧೨೧೨೭**

### ಕರ್ನಾಟಕ ಲೋಚನ ವಿದ್ವತ್ ಪತ್ರಿಕೆಗೆ ನೂತನ ಸಂಪಾದಕರು ಪ್ರೊ. ಚಂದ್ರಶೇಖರ್



ಬಿ.ಎಂ.ಶ್ರೀ. ಪ್ರತಿಷ್ಠಾನ ಹೊರತರುತ್ತಿರುವ ಷಾಣ್ಮಾಸಿಕ ಕರ್ನಾಟಕ ಲೋಚನ ವಿದ್ವತ್ ಪತ್ರಿಕೆ–ಯ ಸಂಪಾದಕರಾಗಿ ಪ್ರೊ. ಚಂದ್ರಶೇಖರ್ ರವರು ಜವಾಬ್ದಾರಿ ವಹಿಸಿಕೊಂಡಿರುತ್ತಾರೆ.

ವಿದ್ಯಾರ್ಥಿಗಳ ಮೆಚ್ಚಿನ ಅಧ್ಯಾಪಕರಾಗಿ ಕಾಲೇಜಿನ ಪ್ರಾಂಶುಪಾಲರಾಗಿ ವಿಭಾಗದ ಮುಖ್ಯಸ್ಥರಾಗಿ, ತಮ್ಮ ಸರಳ ಮತ್ತು ಸಜ್ಜನಿಕೆಯ ವ್ಯಕ್ತಿತ್ವದಿಂದಲೇ ಗುರುತಿಸಿಕೊಂಡಿರುವ ಇವರು ಕನ್ನಡ ಪಠ್ಯಪುಸ್ತಕ ಸಮಿತಿಯ ಸಂಪಾದಕರಾಗಿ ಪದವಿ ಪೂರ್ವ ಮತ್ತು ಪ್ರೌಢ ಶಿಕ್ಷಣ ಪಠ್ಯಗಳನ್ನು ಸಂಪಾದಿಸಿರುವ ಇವರು ಕನ್ನಡ ಸಾಹಿತ್ಯ ಪರಿಷತ್ತು, ಬಿ.ಎಂ.ಶ್ರೀ ಪ್ರತಿಷ್ಠಾನ, ಉದಯಭಾನು ಕಲಾಸಂಘ ಮತ್ತು ಕನ್ನಡ ಪರ ಸಂಘಟನೆಗಳಲ್ಲಿ ಗುರುತಿಸಿಕೊಂಡಿದ್ದಾರೆ. ಉತ್ತಮ ವಾಗ್ಮಿಗಳಾದ ಇವರು ಹಳಗನ್ನಡ ಕಾವ್ಯಗಳನ್ನು ವಿಶೇಷವಾಗಿ ಅಧ್ಯಯನ ಮಾಡಿ ವಿದ್ಯಾರ್ಥಿಗಳಿಗೆ ಮತ್ತು ಕನ್ನಡ ಸಾಹಿತ್ಯ ಲೋಕಕ್ಕೆ ಉಪನ್ಯಾಸ ನೀಡುವುದರ ಜೊತೆಗೆ ಲೇಖನಗಳನ್ನು ಪ್ರಕಟಿಸಿದ್ದಾರೆ.

## ಗ್ರಂಥಾಲಯ/ಹಸ್ತಪ್ರತಿ ವಿಭಾಗದ ವರದಿ

ನವೆಂಬರ್೨೦೨೧ ತಿಂಗಳಿನಲ್ಲಿ ಗ್ರಂಥಾಲಯವು ೫೫ ಪುಸ್ತಕಗಳನ್ನು ಸ್ವೀಕರಿಸಿದ್ದು ಅವುಗಳನ್ನು ದಾಖಲಿಸಿಲಾಗಿದೆ.

ಹಸ್ತಪ್ರತಿ ವಿಭಾಗದಲ್ಲಿ ಭಾರತದ ವಿವಿಧ ಲಿಪಿಗಳ ಪಟಗಳನ್ನು (calligraphy chart) ಸಂರಕ್ಷಿಸಲಾಯಿತು.

### ಹಸ್ತಪ್ರತಿ ವಿಭಾಗಕ್ಕೆ ವಿದ್ಯಾರ್ಥಿನಿಯರ ಭೇಟಿ

ಬಿ.ಎಂ.ಎಸ್. ಮಹಿಳಾ ಕಾಲೇಜಿನ ೨೮ ವಿದ್ಯಾರ್ಥಿನಿಯರ ತಂಡ, ತಮ್ಮ ಪ್ರಾಧ್ಯಾಪಕರೊಂದಿಗೆ, ಬಿ.ಎಂ.ಶ್ರೀ ಪ್ರತಿಷ್ಠಾನದ "ತಿಮ್ಮಪ್ಪ ದಾಸ ಹಸ್ತಪ್ರತಿ ಸಂಗ್ರಹಾಲಯಕ್ಕೆ, ದಿನಾಂಕ ೧೫–೧೧–೨೦೨೧ರಂದು ಶೈಕ್ಷಣಿಕ ಭೇಟಿ ನೀಡಿದರು. ಕನ್ನಡ ವಿಭಾಗದ ಮುಖ್ಯಸ್ಥರಾದ ಡಾ. ಶೀಲಾದೇವಿ ಮಳಿಮಠ್ ಹಾಗೂ ಕನ್ನಡ ವಿಭಾಗದ ಪ್ರಾಧ್ಯಾಪಕರಾದ ಶ್ರೀಮತಿ. ರಾಧಾ ನಾಡಿಗ್, ಶ್ರೀಮತಿ ಶ್ರೀ ರಂಜನಿ ಕೆ.ಜಿ ಮತ್ತು ಶ್ರೀಮತಿ ಮಂಜುಳಾ ಎಲ್ ವಿದ್ಯಾರ್ಥಿಗಳೊಂದಿಗೆ ಭೇಟಿನೀಡಿದ್ದರು. ಹಸ್ತಪ್ರತಿ ಸಂಯೋಜಕರಾದ ಶ್ರೀ ಬಿ.ಎಸ್. ಗುರುಪ್ರಸಾದ್ ಅವರು, ಪ್ರತಿಷ್ಠಾನದ ಹಸ್ತಪ್ರತಿ ಸಂಗ್ರಹಾಲಯದ ಮತ್ತು ಹಸ್ತಪ್ರತಿಗಳ ವೈವಿದ್ಯತೆ ಬಗ್ಗೆ ವಿವರವಾಗಿ ಮಾಹಿತಿ ನೀಡಿದರು. ನಂತರ ಹಸ್ತಪ್ರತಿಗಳ ಇತಿಹಾಸದ ಬಗ್ಗೆ ಉಪನ್ಯಾಸ ನೀಡಿದರು.



### ಹಸ್ತಪ್ರತಿ ಪ್ರದರ್ಶನ

ಬೆಂಗಳೂರಿನ ವಿವೇಕಾನಂದ ಡಿಗ್ರಿ ಕಾಲೇಜು ಸಂಸ್ಥೆಯು "ವಿಶ್ವ ಪಾರಂಪರಿಕ ದಿನಾಚರಣೆ" ಪ್ರಯುಕ್ತ ತಮ್ಮ ಕಾಲೇಜಿನಲ್ಲಿ "ಹೆರಿಟೇಜ್ ಕ್ಲಬ್ ಮತ್ತು ಹೆರಿಟೇಜ್ ವೀಕ್"ನ ಉದ್ಘಾಟನಾ ಸಮಾರಂಭವನ್ನು ಮತ್ತು ಐತಿಹಾಸಿಕ ಹಾಗೂ ಸಾಂಸ್ಕೃತಿಕ ವಸ್ತು ಪ್ರದರ್ಶನವನ್ನು ದಿನಾಂಕ ೧೮ರಿಂದ ೨೦ನೇ ನವೆಂಬರ್‌ವರೆಗೆ ಆಯೋಜಿಸಿತ್ತು.



ಹಸ್ತಪ್ರತಿಗಳಲ್ಲಿನ ವೈವಿಧ್ಯತೆ, ವಿವಿಧ ಲಿಪಿಗಳ ಹಸ್ತಪ್ರತಿಗಳು ಮತ್ತು ಹಸ್ತಪ್ರತಿಯ ಇತಿಹಾಸವನ್ನು ಕುರಿತಂತೆ ಪ್ರದರ್ಶನವನ್ನು ಬಿ.ಎಂ.ಶ್ರೀ. ಪ್ರತಿಷ್ಠಾನವು ದಿನಾಂಕ ೧೮ ಮತ್ತು ೧೯ ನವೆಂಬರ್ ೨೦೨೧ ಕಾಲೇಜಿನಲ್ಲಿ ಆಯೋಜಿಸಿತ್ತು. ಹಸ್ತಪ್ರತಿ ಸಂಯೋಜ–ಕರಾದ ಶ್ರೀ ಬಿ.ಎಸ್. ಗುರುಪ್ರಸಾದ್ ಅವರು ಪ್ರದರ್ಶನವನ್ನು ಏರ್ಪಡಿಸಿ, "ಹಸ್ತಪ್ರತಿ ಇತಿಹಾಸದ ಬಗ್ಗೆ ಪ್ರಾತ್ಯಕ್ಷಿಕೆಯೊಂದಿಗೆ ದಿನಾಂಕ : ೧೯–೧೧–೨೦೨೧ ರಂದು ಉಪನ್ಯಾಸ ನೀಡಿದರು. ಶ್ರೀಮತಿ ಬಿ.ಕೆ. ವರಲಕ್ಷ್ಮೀ, ಸಹಾಯಕರು, ಪ್ರದರ್ಶನವನ್ನು ಏರ್ಪಡಿಸಲು ಸಹಕರಿಸಿದರು.

## ಪ್ರಕಟಣೆ

### ಡಾ. ಗುರುಲಿಂಗ ಕಾಪಸೆ ಅವರಿಗೆ 'ಶ್ರೀ ಸಾಹಿತ್ಯ ಪ್ರಶಸ್ತಿ'

ಶ್ರೀಮತಿ ಕಮಲಿನಿ ಶಾ.ಬಾಲೂರಾವ್ ಅವರು ಸ್ಥಾಪಿಸಿರುವ ದತ್ತಿಯಿಂದ ಬಿ.ಎಂ.ಶ್ರೀ. ಪ್ರತಿಷ್ಠಾನವು ೨೦೧೪ರಿಂದ ಪ್ರತಿವರ್ಷ ಪ್ರದಾನ ಮಾಡುತ್ತ ಬಂದಿರುವ ಪ್ರತಿಷ್ಠಿತ 'ಶ್ರೀ ಸಾಹಿತ್ಯ ಪ್ರಶಸ್ತಿ'ಗೆ, ಕನ್ನಡ ಸಾಹಿತ್ಯಕ್ಕೆ ನೀಡಿದ ಮೌಲಿಕ ಕೊಡುಗೆಯನ್ನು ಗುರುತಿಸಿ ಹಿರಿಯ ಸಂಶೋಧಕರು ಮತ್ತು ವಿದ್ವಾಂಸರಾದ **ಡಾ. ಗುರುಲಿಂಗ ಕಾಪಸೆ** ಅವರನ್ನು ೨೦೨೨ನೇ ಸಾಲಿಗೆ ಸರ್ವಾನುಮತದಿಂದ ಆಯ್ಕೆಮಾಡಲಾಗಿದೆ. ಈ ಸಾಹಿತ್ಯ ಪ್ರಶಸ್ತಿಯು ಮೊದಲ ಸಲ ಕರ್ನಾಟಕದ ಉತ್ತರ ಭಾಗಕ್ಕೆ ಸಂದಿರುವುದು ಒಂದು ವಿಶೇಷವೆಂದು ಆಯ್ಕೆ ಸಮಿತಿ ಅಭಿಪ್ರಾಯಪಟ್ಟಿದೆ. ಆಯ್ಕೆ ಸಮಿತಿಯಲ್ಲಿ ಪ್ರೊ. ಬಸವರಾಜ ಕಲ್ಗುಡಿ. ಪ್ರೊ. ಎ.ವಿ.ನಾವಡ, ಡಾ. ಗುರುಪಾದ ಮರಿಗುದ್ದಿ ಇದ್ದರು. ೯.೧.೨೦೨೨ ರಂದು ಬಿ.ಎಂ.ಶ್ರೀ. ಪ್ರತಿಷ್ಠಾನದ ಎಂ.ವಿ.ಸೀ. ಸಭಾಂಗಣದಲ್ಲಿ ನಡೆಯಲಿರುವ ಸಮಾರಂಭದಲ್ಲಿ ಒಂದು ಲಕ್ಷ ರೂಪಾಯಿಗಳ ನಗದು, ಸ್ಮರಣಿಕೆಗಳೊಂದಿಗೆ ಪ್ರಶಸ್ತಿ ಪ್ರದಾನ ಮಾಡಲಾಗುವುದು.

# ಜನವರಿ ೨೦೨೨ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

ದಿನಾಂಕ : ೦೯-೦೧-೨೦೨೨ ಭಾನುವಾರ ಬೆಳಗ್ಗೆ : ೧೦-೩೦ ಗಂಟೆಗೆ

**ಶ್ರೀ ಸಾಹಿತ್ಯ ಪ್ರಶಸ್ತಿ ಪ್ರದಾನ ಕಾರ್ಯಕ್ರಮ**

**ಪ್ರಶಸ್ತಿ ಪುರಸ್ಕೃತರು : ಡಾ.ಗುರುಲಿಂಗ ಕಾಪಸೆ**

ಹಿರಿಯ ಸಾಹಿತಿಗಳು, ಕರ್ನಾಟಕ ಸಾಹಿತ್ಯ ಅಕಾಡೆಮಿಯ ಮಾಜಿ ಅಧ್ಯಕ್ಷರು

ದಿನಾಂಕ : ೧೭-೦೧-೨೦೨೨. ಸೋಮವಾರ ಸಂಜೆ : ೪-೩೦ ಗಂಟೆಗೆ

ರಂಗನಾಯಕಮ್ಮ-ಕೆ. ಸುಬ್ಬರಾವ್ (ಸಂಗೀತ) ದತ್ತಿ ಕಾರ್ಯಕ್ರಮ

**ಹಾಡುವವರು : ಕು. ಶ್ರವಂತಿ ಎಸ್. ಕರ್ಲಿ**

ದಿನಾಂಕ : ೨೩-೦೧-೨೦೨೨. ಭಾನುವಾರ ಬೆಳಗ್ಗೆ : ೧೦-೩೦

**ಶ್ರೀ ಕೆ. ಮೋಹನ್ ದೇವ್ ಆಳ್ವ -ಡಾ.ಎಂ.ಕೆ. ಶೈಲಜ ಆಳ್ವ ದತ್ತಿ ಕಾರ್ಯಕ್ರಮ**

**'ದೇಶಭಕ್ತಿ ಗೀತೆಗಳ ಗಾಯನ ಸ್ಪರ್ಧೆ'**

ದಿನಾಂಕ : ೩೦-೦೧-೨೦೨೨. ಭಾನುವಾರ ಬೆಳಗ್ಗೆ : ೧೦-೩೦ ಗಂಟೆಗೆ

**ಹಾಸ್ಯಬ್ರಹ್ಮ ಟ್ರಸ್ಟ್ ದತ್ತಿ ಕಾರ್ಯಕ್ರಮ**

**ಉಪನ್ಯಾಸ : ಪ್ರೊ. ಜಿ. ಅಶ್ವತ್ಥನಾರಾಯಣ**

**ವಿಷಯ: ಬೀಚಿ ಮತ್ತು ಹಾಸ್ಯ**

೫ನೇಪುಟದಿಂದ

ಕಿರುಪರಿಚಯ

## ಡಾ. ಎನ್. ಗೋಪಾಲ ಕೃಷ್ಣ



ಜನಪ್ರಿಯ ವಿಜ್ಞಾನ, ಆರೋಗ್ಯ ವಿಜ್ಞಾನ, ಮಾನಸಿಕ ಆರೋಗ್ಯದ ಬಗ್ಗೆ ಲೇಖನಗಳು, ಪುಸ್ತಕಗಳ ರಚನೆಯಲ್ಲಿ ತೊಡಗಿರುವ ಡಾ. ಎನ್. ಗೋಪಾಲಕೃಷ್ಣ ಅವರು ಈವರೆಗೆ ಸುಮಾರು ನಲವತ್ತು ಕೃತಿಗಳನ್ನು ಕನ್ನಡದಲ್ಲೂ, ಮೂರು ಕೃತಿಗಳನ್ನು ಇಂಗ್ಲಿಷಿನಲ್ಲೂ ರಚಿಸಿದ್ದಾರೆ, ಸಮೂಹ ಮಾಧ್ಯಮದಲ್ಲಿ ಎಂ.ಎ. ಮತ್ತು ಆರೋಗ್ಯ ಸಂವಹನದಲ್ಲಿ ಪಿಎಚ್.ಡಿ. ಪದವಿಯೊಡನೆ, ಬೆಂಗಳೂರಿನ ನಿಮ್ಹಾನ್ಸ್ ಸಂಸ್ಥೆಯಲ್ಲಿ ಪ್ರಕಾಶನ ವಿಭಾಗದ ಸಂಪಾದಕರಾಗಿ ಹಾಗೂ ಮುಖ್ಯಸ್ಥರಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿರುವರು. ೧೯೮೮ರಲ್ಲಿ ಬ್ರಿಟಿಷ್ ಕೌನ್ಸಿಲ್ ಆಹ್ವಾನದ ಮೇರೆಗೆ ಲಂಡನ್, ಸ್ಕಾಟ್ಲೆಂಡ್‌ಗಳ ವಿಶ್ವವಿದ್ಯಾಲಯಗಳು ಮತ್ತು ಖಾಸಗಿ ಪ್ರಕಾಶನ ಸಂಸ್ಥೆಗಳಲ್ಲಿ ಅಧ್ಯಯನ ಮಾಡಿದ್ದಾರೆ. ಕನ್ನಡ ವೈದ್ಯಸಾಹಿತ್ಯ ಪರಿಷತ್ತಿನ ಬೆಂಗಳೂರು ಜಿಲ್ಲೆಯ ಅಧ್ಯಕ್ಷರಾಗಿ ಬೆಂಗಳೂರಿನ ಪ್ರಮುಖ ಆಸ್ಪತ್ರೆಗಳಲ್ಲಿ ಕನ್ನಡ ವೈದ್ಯಸಾಹಿತ್ಯ ಪ್ರಸಾರ ಕಾರ್ಯ ಕೈಗೊಂಡಿದ್ದಾರೆ. ಹವ್ಯಾಸಿ ಆಪ್ತಸಲಹಾಕಾರರ ವೇದಿಕೆಯ ಪದಾಧಿಕಾರಿಗಳಾಗಿಯೂ ಸೇವೆ ಸಲ್ಲಿಸಿದ್ದಾರೆ. ನರ್ಸಿಂಗ್ ವಿದ್ಯಾರ್ಥಿಗಳಿಗೆ ಮಾನಸಿಕ ಆರೋಗ್ಯ ಶಿಕ್ಷಣದ ಜೊತೆಗೆ ಇಂಗ್ಲಿಷ್ ಬೋಧನೆ ಮತ್ತು ಇಂಗ್ಲಿಷ್‌ನಿಂದ ಕನ್ನಡಕ್ಕೆ ಅನುವಾದ ಕಾರ್ಯದಲ್ಲಿ ತೊಡಗಿದ್ದಾರೆ. ಕಳೆದ ೩೦ ವರ್ಷಗಳಿಂದಲೂ ಬೆಂಗಳೂರು ಆಕಾಶವಾಣಿ ಕೇಂದ್ರದಲ್ಲಿ 'ವಿಜ್ಞಾನದ ಮುನ್ನಡೆ' ಕಾರ್ಯಕ್ರಮದ ಮೂಲಕ ಮಾತನಾಡುತ್ತಿದ್ದಾರೆ. ಕನ್ನಡ ಮತ್ತು ಇಂಗ್ಲಿಷ್ ದಿನಪತ್ರಿಕೆಗಳು, ವಾರಪತ್ರಿಕೆಗಳು ಮತ್ತು ಮಾಸಪತ್ರಿಕೆಗಳಲ್ಲಿ ಲೇಖನಗಳನ್ನು ಪ್ರಕಟಿಸಿದ್ದಾರೆ. ೨೦೧೪-೧೫ರಲ್ಲಿ ಕರ್ನಾಟಕ ಸರ್ಕಾರದ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯಿಂದ 'ಶ್ರೇಷ್ಠ ವಿಜ್ಞಾನ ಸಂವಹನ ಪ್ರಶಸ್ತಿ'ಯನ್ನು ಪಡೆದಿದ್ದಾರೆ.

ಕಿರು ಪರಿಚಯ

## ಡಾ. ಗುರುಲಿಂಗ ಕಾಪಸೆ



ಅವರು ೧೯೨೮ರ ಏಪ್ರಿಲ್ ೨ ರಂದು ವಿಜಯಪುರ ಜಿಲ್ಲೆಯ ಇಂಡಿ ತಾಲೂಕಿನ ಬಿ.ಕೆ. ಲೋಣಿಯಲ್ಲಿ ಜನಿಸಿದರು. ಮಧುರಚೆನ್ನರ ಜೀವನ ಹಾಗೂ ಕೃತಿಗಳು ಕುರಿತು ಮಹಾಪ್ರಬಂಧ ಬರೆದಿದ್ದಾರೆ. 'ಹಲಸಂಗಿ ಗೆಳೆಯರು' (೧೯೯೮, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ) ಡಾ. ಕಾಪಸೆ ಅವರು ಸಂಪಾದಿಸಿದ ಮಧುರ ಚೆನ್ನರ ಲೇಖನಗಳಲ್ಲಿ ಆ ಕಾಲದ ಅನೇಕ ಜಾನಪದ ವಿರಳ ಸಂಗತಿಗಳು ದಾಖಲಾಗಿವೆ. ಕನ್ನಡ ವಿಶ್ವವಿದ್ಯಾಲಯವು "ಜಾನಪದ ಅಧ್ಯಯನ" ಕ್ಕೆ ಕೊಟ್ಟ ವಿಶಿಷ್ಠ ಕೊಡುಗೆಯಾಗಿದೆ. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ ನಿವೃತ್ತಿಯಾಗಿದ್ದಾರೆ.

ಕೃತಿಗಳು: ಅಕ್ಕಮಹಾದೇವಿ, ಮಧುರಚೆನ್ನ, ಶ್ರೀ ಅರವಿಂದರು, ಬಸವೇಶ್ವರ, ಹಲಸಂಗಿ ಗೆಳೆಯರು, ಪ್ರವಾಸಕಥನ: ಶಾಲ್ಮಲೆಯಿಂದ ಗೋದಾವರಿಯವರೆಗೆ ಹಾಗೂ ಮಕ್ಕಳ ಸಾಹಿತ್ಯ: ಕವಿ ರವೀಂದ್ರರು, ಶಿ.ಶಿ.ಬಸವನಾಳ ಮತ್ತು ವಿಮರ್ಶೆ: ಸಾಹಿತ್ಯ ಸಂಬಂಧ, ಬೇಂದ್ರೆ-ಮಧುರಚೆನ್ನ ಸಖ್ಯಯೋಗ.

ಸಂಪಾದಿತ ಕೃತಿಗಳು: ಕಾಲ-ಕವಿ (ಕಾವ್ಯ), ಪಾರಮಾರ್ಥ ಗೀತಾ ಪ್ರವಚನ, ಹರಿಹರನ ಐದು ರಗಳೆಗಳು, ಅರವಿಂದ ಪರಿಮಳ, ಹೈಮವತಿ ಶೈಶವಲೀಲೆ (ಗಿರಿಜಾ ಕಲ್ಯಾಣ ಸಂಗ್ರಹ), ಚೆಂಬೆಳಕು (ಕಣವಿ ಅಭಿನಂದನ ಗ್ರಂಥ), ಬೆಳಗಲಿ (ದು.ನಿಂ.ಬೆಳಗಲಿ ಅಭಿನಂದನ ಗ್ರಂಥ)

ಕನ್ನಡ ಮರಾಠಿ ಸಾಹಿತ್ಯ ಬಾಂಧವ್ಯ, ಭವ್ಯ ಮಾನವ ಕಾವ್ಯ ದರ್ಶನ, ಜ್ಞಾನಸಿಂಧು, ಪಿ.ಧೂಲಾಸಾಹೇಬ, ಮಧುರಚೆನ್ನರ ಲೇಖನಗಳು, ಕನ್ನಡ ಕಾವಲು, ಚಾಮರಸ, ಮುಗಿಯದ ಹಾಡು, ಆತ್ಮಶೋಧ (ಮಧುರಚೆನ್ನರ ಸಮಗ್ರ ಸಾಹಿತ್ಯ ಶೋಧ), ಅನುವಾದ ಸಾಹಿತ್ಯ: ಇದೇ ನಿಜವಾದ ಮೂರ್ತಿಪೂಜೆ ಮತ್ತು ಇದೇ ನಿಜವಾದ ಧರ್ಮ (ಮರಾಠಿಯಿಂದ ಕನ್ನಡಕ್ಕೆ), ಬಸವೇಶ್ವರಾಂಚೆ ವಚನ (ಕನ್ನಡದಿಂದ ಮರಾಠಿಗೆ) ಪ್ರಕಟವಾಗಿವೆ.

# ಬಿ.ಎಂ.ಶ್ರೀ ಪ್ರತಿಷ್ಠಾನದಲ್ಲಿ ನಡೆದ ಕಾರ್ಯಕ್ರಮಗಳ ವರದಿ

## ತೀ.ನಂ. ಶ್ರೀ. ಸ್ಮಾರಕ ವಿಶೇಷ ಉಪನ್ಯಾಸ

ದಿನಾಂಕ ೨೬-೧೧-೨೦೨೧ರಂದು ತೀ.ನಂ.ಶ್ರೀ. ವಿದ್ಯಾರ್ಥಿನಿ ಶ್ರೀಮತಿ ವಿ. ಅಮೃತಾ ಅವರು ಸ್ಥಾಪಿಸಿರುವ ದತ್ತಿಯಡಿಯಲ್ಲಿ 'ತೀ.ನಂ.ಶ್ರೀ ವಿಶೇಷ ಉಪನ್ಯಾಸ' ಆಯೋಜಿಸಲಾಗಿತ್ತು. ಕನ್ನಡ ಸ್ನಾತಕೋತ್ತರ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ ಕಲಾಕಾಲೇಜು, ಬೆಂಗಳೂರಿನ ಪ್ರಾಧ್ಯಾಪಕರಾದ ಡಾ.ಬಿ.ಸಿ.ನಾಗೇಂದ್ರಕುಮಾರ್ ಅವರು "ಕವಿಯಾಗಿ ತೀನಂಶ್ರೀ" ವಿಷಯವನ್ನು ಕುರಿತು ಉಪನ್ಯಾಸ ನೀಡಿದರು. ಡಾ. ಬಿ.ಸಿ.ರಾಜಕುಮಾರ್ ಅವರು ಉಪನ್ಯಾಸಕರನ್ನು, ಪರಿಚಯಿಸಿದರು. ಅಧ್ಯಕ್ಷತೆ ವಹಿಸಿದ್ದ ಡಾ. ಆರ್. ಲಕ್ಷ್ಮೀನಾರಾಯಣ, ಜಾಲ ಗೋಷ್ಠಿಯ ಮೂಲಕ ಭಾಗವಹಿಸಿದ್ದ ಕೇಳುಗರನ್ನು ಸ್ವಾಗತಿಸಿದರು. ತೀ.ನಂ.ಶ್ರೀ.ಯವರ ಬದುಕು ಬರಹದ ಬಗ್ಗೆ ವಿವರಿಸಿದ ಉಪನ್ಯಾಸಕರು ತೀನಂಶ್ರೀ ಹಲವು ಪ್ರತಿಭೆಗಳ ಸಂಗಮ ಎಂದು ಹೇಳಿದರು. ತಿ.ನಂ.ಶ್ರೀಕಂಠಯ್ಯನವರು ಕನ್ನಡ ಸಾರಸ್ವತ ಲೋಕ ಜಾನಪದ, ಛಂದಸ್ಸು, ಕಾವ್ಯಮೀಮಾಂಸೆ ವಿಮರ್ಶೆ ಮೊದಲಾದ ಶಾಸ್ತ್ರ ಕೃತಿಗಳಿಗೆ ಪ್ರಸಿದ್ಧಿಹೊಂದಿದವರು. ಕನ್ನಡ ಮಧ್ಯಮ ವ್ಯಾಕರಣ ಪ್ರಯೋಗ ತೀನಂಶ್ರೀಯವರ ಪ್ರಸಿದ್ಧ ಕೃತಿ. ತೀನಂಶ್ರೀಯವರು 'ಒಲುಮೆ' ಕವನ ಸಂಕಲನವನ್ನು ಬರೆದಾಗ ಅವರು ಇನ್ನೂ ಯುವಕರು. ಹೆಣ್ಣು ಗಂಡುಗಳ ಮಧುರ ಸಂಬಂಧವೇ ಪ್ರೀತಿ ಎಂದು ತೀನಂಶ್ರೀ ತಮ್ಮ ಈ 'ಒಲುಮೆ' ಕವನ ಸಂಕಲನದಲ್ಲಿ ಅಭಿವ್ಯಕ್ತಿಸಿದ್ದಾರೆ ಎಂದು ಉಪನ್ಯಾಸಕರು ಅಭಿಪ್ರಾಯಪಟ್ಟರು.




ತೀನಂಶ್ರೀಯವರು ಪ್ರಾಕೃತ, ಇಂಗ್ಲೀಷ್, ಸಂಸ್ಕೃತ ಭಾಷೆಯಿಂದ ಹಲವು ಕೃತಿಗಳನ್ನು ಅನುವಾದಿಸಿದರು. 'ಒಲುಮೆ' ಕವನ ಸಂಕಲನವು ಪ್ರೇಮ ತತ್ವದ ವಿಭಿನ್ನ ವಿನ್ಯಾಸಗಳನ್ನು ರಚಿಸಿದೆ ಎಂದರು. ಪ್ರೇಮ ಎಂದರೇನು? ಪ್ರೇಮದ ಅಲೌಕಿಕತೆ, ಜನ್ಮಾಂತರದ ಋಣಾನುಬಂಧ ಎನ್ನುತ್ತಾರೆ. ತೀ.ನಂ.ಶ್ರೀ. ಎಂದು ಉಪನ್ಯಾಸಕರು ವಿವರಿಸಿದರು. ಪ್ರೇಮ ಕೌಟುಂಬಿಕ ಆವರಣದ ಸೃಷ್ಟಿ. ಹೆಣ್ಣನ್ನು ಸ್ತ್ರೀವಾದಿ ನೆಲೆಯಲ್ಲಿ ನೋಡುವ ತೀನಂಶ್ರೀ ಪ್ರೇಮ ಸಾರ್ವಕಾಲಿಕ ಸತ್ಯವಾದರೂ ಹೆಣ್ಣು ಕೇವಲ ಭೋಗ ಮಾತ್ರವೇ ಅಲ್ಲ ಅದೊಂದು ವ್ಯಕಿತ್ವ ಎನ್ನುತ್ತಾರೆ ತೀನಂಶ್ರೀ ಅವರು. ಹೀಗೆ ಕಾಣುವ ಕವಿಗಳಾದ ಕುವೆಂಪು, ಬೇಂದ್ರೆ, ಕೆ.ಎಸ್.ನ, ಜಯಂತ್ ಕಾಯ್ಕಿಣಿ ಸಾಲಿನಲ್ಲಿ ನಿಲ್ಲುತ್ತಾರೆ. ವಿರಹ ಪ್ರೇಮವನ್ನು ಹೆಚ್ಚಿಸುವ ಭಾವ. ಪ್ರೇಮದ ಬಗಲಲ್ಲೇ ಶೋಕವಿರುತ್ತದೆ. ನಗರ ಜೀವನ, ಪ್ರೇಮದಲ್ಲಿ ಭೋಗವನ್ನು ನಿರೀಕ್ಷಿಸಿ ಅದನ್ನು ಕಲುಷಿತಗೊಳಿಸುತ್ತದೆ. ನಗರವು ಸರಕು ಸಂಸ್ಕೃತಿಯ ಪ್ರತಿನಿಧಿ. ಪ್ರೀತಿಯು ವ್ಯಕ್ತಿಯ ಅಹಂಕಾರದ ಭ್ರಮ ನಿರಸನ, ಸೋಲು ತಪ್ಪುಗಳ ಮನವರಿಕೆ. ಗಂಡುತನ ಕಳೆದುಕೊಳ್ಳುವಿಕೆಯೇ ಪ್ರೇಮದ ಆವಿಷ್ಕಾರದ ಮೂಲ ಎನ್ನುತ್ತಾರೆ ತೀನಂಶ್ರೀ. "ಒಲವು ಹಾಗೆಯೇ ತುಸು ತಪ್ಪಾದರೂ ಕಲಹವೆ ನೋವೆ" ಒಲವು ಹಗೆಯಾಗಬಾರದು. ಅಂಜಿಕೆ ಪ್ರೇಮದ ಸಾವಿಗೆ ಕಾರಣವಾಗುತ್ತದೆ. ವಿಷಾದ, ವಿಧಿವಾದ ಒಪ್ಪಿಗೆ, ತರ್ಕ ಮೀರಿ ನಡೆಯೋದು ಪ್ರೇಮ. ತೀನಂಶ್ರೀ ಅವರು ಸೋಪೋಕ್ಲಿಸ್ ಹಾಗೂ ಕಾಳಿದಾಸನ ನಾಟಕಗಳ ಅನುವಾದ ಮಾಡಿದ್ದಾರೆ ಎಂದು ಉಪನ್ಯಾಸಕರು ವಿವರಿಸಿದರು.

ತೀನಂಶ್ರೀಯವರ ವ್ಯಕ್ತಿತ್ವ ಮತ್ತು ಅವರ ಸಾಧನೆಯ ಕೆಲವು ವಿಚಾರಗಳನ್ನು ಪ್ರಸ್ತಾಪಿಸಿದರು. ತೀನಂಶ್ರೀಯವರಿಗೆ ಸಂಬಂಧಿಸಿದ ಕೆಲವು ಮಹತ್ವಪೂರ್ಣ ವಿಚಾರಗಳನ್ನು ಹಂಚಿಕೊಂಡರು. ಉಪನ್ಯಾಸಕರು ತಮ್ಮ ಆಳವಾದ ಅಧ್ಯಯನದ ಮೂಲಕ ತೀನಂಶ್ರೀಯವರ ಒಲುಮೆ ಕವನ ಸಂಕಲನ ಮತ್ತು ಹಲವು ಅನುವಾದಗಳನ್ನು ಚೆನ್ನಾಗಿ ಪರಿಚಯಿಸಿದ್ದಾರೆ ಎಂದು ಅವರನ್ನು ಪ್ರಶಂಶಿಸಿದರು.

ಡಾ. ಬಿ.ಸಿ. ರಾಜಕುಮಾರ್‌ರವರು ಎಲ್ಲರಿಗೂ ವಂದಿಸಿದರು ಹಾಗೂ ಜಾಲಗೋಷ್ಠಿಯನ್ನು ನಿರ್ವಹಿಸಿದರು.

## ಶ್ರೀಮತಿ. ರಂಗನಾಯಕಮ್ಮ-ಶ್ರೀ ಜಿ.ಸುಬ್ಬರಾವ್ ನೆನಪಿನ ದತ್ತಿ ನಿಧಿ ಸಂಗೀತ ಕಾರ್ಯಕ್ರಮ

ಈ ದಂಪತಿಗಳ ಹಿರಿಯ ಮಗಳಾದ ಶ್ರೀಮತಿ. ಸುನಂದ (೧೬ಮೇ ೧೯೪೨) ತಮ್ಮ ವಿದ್ಯಾಭ್ಯಾಸದ ನಂತರ ಸಂಗೀತವನ್ನು ದಿವಂಗತ. ಡಿ.ಸುಬ್ಬರಾಮಯ್ಯನವರ ಬಳಿ ವಿದ್ಯಾರ್ಥಿಯಾಗಿ ಅಭ್ಯಾಸ ಮಾಡಿ, ಹಲವಾರು ಪ್ರಶಸ್ತಿ ಮತ್ತು ಬಹುಮಾನಗಳನ್ನು ಪಡೆದಿದ್ದಾರೆ. ಶ್ರೀಮತಿ ಸುನಂದ ಅವರು ತಮ್ಮ ಮಾತಾಪಿತೃಗಳ ನೆನಪಿನಲ್ಲಿ ಜನವರಿಯಲ್ಲಿ ಒಂದು ಸಂಜೆ ಸಂಗೀತ ಕಾರ್ಯಕ್ರಮವನ್ನು ಆಯೋಜಿಸಲೆಂದು ಒಂದು ದತ್ತಿ ನಿಧಿಯನ್ನು ಸ್ಥಾಪಿಸಿದ್ದಾರೆ.

## ಶ್ರೀ ಕೆ. ಮೋಹನ್ ದೇವ್ ಆಳ್ವ

ಆಚಾರ್ಯ ಪಾಠಶಾಲಾ ಶಿಕ್ಷಣದತ್ತಿಯ ಟ್ರಸ್ಟಿ ಮತ್ತು ಮೆಂಟರ್, ಬೆಂಗಳೂರು ಗಾಯನ ಸಮಾಜದ ಟ್ರಸ್ಟಿ, ಶ್ರೀ ಕಂಠೀರವ ಫಿಲ್ಮ್ ಸ್ಟೂಡಿಯೋದ ನಿರ್ದೇಶಕರು. ಭಾರತ ಫ್ರಾನ್ಸ್ ಸಾಂಸ್ಕೃತಿಕ ಸಂಘ, ಬೆಂಗಳೂರು, ಕರ್ನಾಟಕ ವಲಯದ ಅಧ್ಯಕ್ಷರು ಬೆಂಗಳೂರು ಮಹಾನಗರ ಪಾಲಿಕೆಯ ಕಾರ್ಪೊರೇಟರ್ ಆಗಿದ್ದರು. ಭಾರತ ಸರ್ಕಾರದ ಫಿಲ್ಮ್ ಸೆನ್ಸಾರ್ ಬೋರ್ಡಿನ ಕರ್ನಾಟಕ ವಲಯದ ಸದಸ್ಯರು ಆಗಿದ್ದರು.

## ಡಾ|| ಎಂ.ಕೆ. ಶೈಲಜಾ ಆಳ್ವ

ಇವರು ಮಕ್ಕಳ ತಜ್ಞರು. ಕರ್ನಾಟಕ ಸರ್ಕಾರದ ಆರೋಗ್ಯ ಇಲಾಖೆಯಲ್ಲಿ ಸೀನಿಯರ್ ಸ್ಪೆಷಲಿಸ್ಟ್ ಆಗಿದ್ದರು. ಕರ್ನಾಟಕ ಸರ್ಕಾರದ ಆರೋಗ್ಯ ಇಲಾಖೆಯಲ್ಲಿ ರಕ್ತನಿಧಿ (ಬ್ಲಡ್ ಬ್ಯಾಂಕ್)ಗಳನ್ನು ಸ್ಥಾಪಿಸಿ, ಬೆಳೆಸುವಲ್ಲಿ ಹೆಚ್ಚಿನ ಕಾರ್ಯವನ್ನು ಮಾಡಿದ್ದರು.

## ಹಾಸ್ಯ ಬ್ರಹ್ಮ ಟ್ರಸ್ಟ್

ಸದಭಿರುಚಿಯ ಹಾಸ್ಯ ಪ್ರಚಾರಕ್ಕಾಗಿ ಹಾಸ್ಯಬ್ರಹ್ಮ ಟ್ರಸ್ಟ್ ಅನ್ನು ಸಮಾನ ಮನಸ್ಕ ಸ್ನೇಹಿತರೊಂದಿಗೆ ೨೦೦೩ರಲ್ಲಿ ಸ್ಥಾಪಿಸಲಾಯಿತು. ಸುಮಾರು ವರ್ಷಗಳ ಕಾಲ ಸದಭಿರುಚಿಯ ಹಾಸ್ಯ ಸಾಹಿತ್ಯವನ್ನು ಹಾಸ್ಯೋತ್ಸವಗಳ ಮೂಲಕ, ಹಾಸ್ಯ ಪುಸ್ತಕಗಳ ಪ್ರಕಟಣೆಯ ಮೂಲಕ, ಹಾಸ್ಯ ಸೆಮಿನಾರುಗಳನ್ನು ಆಯೋಜಿಸುವ ಮೂಲಕ, ಹಾಸ್ಯ ಕಾರ್ಯಕ್ರಮಗಳನ್ನು ಸಂಘಟಿಸುವ ಮೂಲಕ, ಹಾಸ್ಯ ಬರಹಗಾರರಿಗೆ, ವ್ಯಂಗ್ಯ ಚಿತ್ರಕಾರರಿಗೆ ಆರ್ಥಿಕ ನೆರವು ನೀಡುವುದರ ಮೂಲಕ, ಹಾಸ್ಯ ಬರಹಗಾರರಿಗೆ, ವ್ಯಂಗ ಚಿತ್ರಕಾರರಿಗೆ ಆರ್ಥಿಕ ನೆರವು ನೀಡುವುದರ ಮೂಲಕ ಮತ್ತು ಹಲವಾರು ಸಮಾಜಮುಖಿ ಕಾರ್ಯಗಳ ಮೂಲಕ ಹಾಸ್ಯಬ್ರಹ್ಮ ಟ್ರಸ್ಟ್ ತನ್ನ ಗುರಿಯಲ್ಲಿ ಬಹುತೇಕ ಯಶಸ್ಸನ್ನು ಸಾಧಿಸಿದೆ ಹಾಗೂ ಸಾರಸ್ವತ ಲೋಕದಲ್ಲಿ ತನ್ನದೇ ಆದ ಹೆಸರನ್ನು ಛಾಪಿಸಿದೆ.

೨೦೧೮–೨೦೨೧ರ ಅವಧಿಯಲ್ಲಿ ಬಿ.ಎಂ.ಶ್ರೀ. ಪ್ರತಿಷ್ಠಾನದ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ ಸೇವೆ ಸಲ್ಲಿಸಿ ೪೧ನೇ ವಾರ್ಷಿಕ ಸರ್ವಸದಸ್ಯರ ಸಭೆಯಲ್ಲಿ ನಿವೃತ್ತರಾದ ಸದಸ್ಯರಿಗೆ ಬಿ.ಎಂ.ಶ್ರೀ ಪ್ರತಿಷ್ಠಾನವು ಧನ್ಯವಾದಗಳನ್ನು ಅರ್ಪಿಸುತ್ತದೆ.

## ನಿವೃತ್ತ ಕಾರ್ಯಕಾರಿ ಸಮಿತಿ ಸದಸ್ಯರ ವಿವರಗಳು

### ಶ್ರೀ ಡಿ.ನಂ. ವೆಂಕಟರಮಣಯ್ಯ



ನಿವೃತ್ತ ಬ್ಯಾಂಕ್ ಅಧಿಕಾರಿ, ಹಲವಾರು ಸಂಘ ಸಂಸ್ಥೆಗಳಲ್ಲಿ ಈ ಹಿಂದೆ ಹಾಗೂ ಈಗ ಪದಾಧಿಕಾರಿಯಾಗಿ ಸೇವೆಸಲ್ಲಿಸಿರುತ್ತಾರೆ. ಇವರು ೨೦೧೦ರಿಂದ ೨೦೧೬ರ ವರೆಗೆ ಪ್ರತಿಷ್ಠಾನದ ಕಾರ್ಯಕಾರಿ ಸಮಿತಿಯ ಸದಸ್ಯರಾಗಿದ್ದರು. ಈ ಅವಧಿಯಲ್ಲಿ ಕೆಲ ಕಾಲ ಇವರು ಪ್ರತಿಷ್ಠಾನದ ಆಂತರಿಕ ಲೆಕ್ಕ ಪರಿಶೋಧಕರಾಗಿ ಲೆಕ್ಕಪತ್ರ ವ್ಯವಸ್ಥೆಯನ್ನು ಸದೃಢಗೊಳಿಸಿದ್ದಲ್ಲದೇ ಪ್ರತಿಷ್ಠಾನದ ಸರ್ವತೋಮುಖ ಬೆಳವಣಿಗೆಗೆ ಶ್ರಮಿಸಿರುತ್ತಾರೆ.

### ಡಾ. ಆರ್. ವಾದಿರಾಜ್



ಡಾ. ಆರ್. ವಾದಿರಾಜು ಅವರು ವಿಜಯಪದವಿ ಕಾಲೇಜು, ಆರ್.ವಿ.ರಸ್ತೆ, ಬಸವನಗುಡಿ, ಬೆಂಗಳೂರು ಇಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಲೇಖಕ, ಕವಿ, ವಿಮರ್ಶಕರಾಗಿ, ೪ ಸ್ವಂತ ಕೃತಿಗಳನ್ನು ರಚಿಸಿದ್ದು ಹಾಗೂ ೭ ಸಂಪಾದಕ ಕೃತಿಗಳನ್ನು ಪ್ರಕಟಿಸಿದ್ದಾರೆ. ಸ್ನೇಹಕೂಟ ಸಾಂಸ್ಕೃತಿಕ ವೇದಿಕೆಯ ಅಧ್ಯಕ್ಷರಾಗಿ, ವೇದಿಕೆಯವತಿಯಿಂದ ೨೫ ಪುಸ್ತಕಗಳನ್ನು ಪ್ರಕಟಣೆ ಮಾಡಿದ್ದಾರೆ. ಹಾಗೂ ಇದರ ವತಿಯಿಂದ ೧೦೦ ಸದಭಿರುಚಿ ಕಾರ್ಯಕ್ರಮಗಳನ್ನು ನಿರೂಪಿಸಿದ್ದಾರೆ.

### ಸಂಗಮೇಶ ಬಾದವಾಡಗಿ



ಶ್ರೀ ಸಂಗಮೇಶ ಬಾದವಾಡಗಿಯವರು ಮೂಲತ ಕೊಪ್ಪಳ ಜಿಲ್ಲೆಯವರಾಗಿದ್ದು ಎಂ.ಎ. (ಕನ್ನಡ) ಪಧವೀಧರರು ಶ್ರೀಯುತರು ಶಿಕ್ಷಣ ಮತ್ತು ಆಹಾರ ನಾಗರೀಕ ಸರಬರಾಜು ಇಲಾಖೆಯಲ್ಲಿ ಸೇವೆ ಸಲ್ಲಿಸಿದ ನಂತರ ಕೊನೆಯಲ್ಲಿ ವಿಧಾನಸೌಧದ ಕರ್ನಾಟಕ ರಾಜ್ಯಗಡಿ ಅಭಿವೃದ್ಧಿ ಪ್ರಾಧಿಕಾರದಲ್ಲಿ ವಿಶೇಷಾಧಿಕಾರಿಯಾಗಿ ನಿವೃತ್ತಿ ಹೊಂದಿದವರು. ಶ್ರೀಯುತರು ಎರಡು ಅವಧಿಗೆ ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿಗಳಾಗಿ ಕಾರ್ಯ ನಿರ್ವಹಿಸಿ, ಹಲವಾರು ಅಖಿಲಭಾರತ ಸಾಹಿತ್ಯ ಸಮ್ಮೇಳನ, ಜಿಲ್ಲಾ, ತಾಲೂಕು ಸಾಹಿತ್ಯ ಸಮ್ಮೇಳನಗಳನ್ನು ಸಂಘಟಿಸಿದ ಹೆಗ್ಗಳಿಕೆ ಅವರದ್ದು. ಕುಷ್ಟಗಿ, ತಾಲೂಕು ಸಾಹಿತ್ಯ ಸಮ್ಮೇಳನದ ಸರ್ವಾಧ್ಯಕ್ಷರಾಗಿಯು ಗೌರವಕ್ಕೆ ಭಾಜನರಾಗಿದ್ದಾರೆ. ಶ್ರೀಯುತರು ವಿವಿಧ ಸಾಹಿತ್ಯ ಪ್ರಕಾರಗಳಿಗೆ ಸಂಬಂಧಿಸಿದಂತೆ ಒಟ್ಟು ಹದಿನೈದಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. ಅನೇಕ ರಾಜ್ಯಮಟ್ಟದ, ಅಂತರಾಷ್ಟ್ರೀಯ ಮಟ್ಟದ ಸಂಸ್ಥೆಗಳಿಂದ ಪ್ರಶಸ್ತಿಗಳಿಗೂ ಭಾಜನರಾಗಿದ್ದಾರೆ. ಪ್ರಸ್ತುತ ಸಂಗಮೇಶ ಬಾದವಾಡಗಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಸದಸ್ಯರಾಗಿಯೂ ಕಾರ್ಯ ನಿರ್ವಹಿಸುತ್ತಿದ್ದಾರೆ.

### ಶ್ರೀ ಎಂ.ಎಸ್. ರಾಮಪ್ರಸಾದ್

ಶ್ರೀ ಎಂ.ಎಸ್. ರಾಮಪ್ರಸಾದ್, ಪ್ರತಿಷ್ಠಾನದ ಮಾಜಿ ಕೋಶಾಧಿಕಾರಿ, ಮಾಜಿ ಕಾರ್ಯನಿರ್ವಾಹಕ ಕಾರ್ಯದರ್ಶಿಗಳು ಕರ್ನಾಟಕ ವಿಜ್ಞಾನ & ತಂತ್ರಜ್ಞಾನ ಮಂಡಳಿ. ಬೆಂಗಳೂರು, ನಿವೃತ್ತ ಇಂಜಿನಿಯರ್ ಇವರು ೨೦೧೦ರಿಂದ ೨೦೧೬ರ ವರೆಗೆ ಪ್ರತಿಷ್ಠಾನದ ಕಾರ್ಯಕಾರಿ ಸಮಿತಿಯ ಸದಸ್ಯರಾಗಿದ್ದರು. ಈ ಅವಧಿಯಲ್ಲಿ ಇವರು ಪ್ರತಿಷ್ಠಾನದ ಆಂತರಿಕ ವ್ಯವಸ್ಥೆಯನ್ನು ಸರಿಪಡಿಸಿ ಪ್ರತಿಷ್ಠಾನದ ಸರ್ವತೋಮುಖ ಬೆಳವಣಿಗೆಗೆ ಶ್ರಮಿಸಿರುತ್ತಾರೆ



## ಹೊಸ ಸದಸ್ಯರು

೨೦೨೧–೨೦೨೪ ಅವಧಿಗೆ ೪೧ನೇ ವಾರ್ಷಿಕ ಸರ್ವಸದಸ್ಯರ ಸಭೆಯಲ್ಲಿ ಬಿ.ಎಂ.ಶ್ರೀ. ಪ್ರತಿಷ್ಠಾನದ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ ಚುನಾಯಿತರಾದ ಸದಸ್ಯರಿಗೆ ಹೊಂಗನಸು ಅಭಿನಂದಿಸುತ್ತದೆ.

## ನೂತನವಾಗಿ ಚುನಾಯಿತರಾದ ಕಾರ್ಯಕಾರಿ ಸಮಿತಿ ಸದಸ್ಯರ ವಿವರಗಳು

### ಡಾ. ಪ್ರಭಾಕರ ಬೆಲವಾಡಿ



ಬಿ.ಎಸ್ಸಿ. ಎಂ.ಎಸ್ಸಿ.:ಪಿಎಚ್. ಡಿ. : ರಸಾಯನಶಾಸ್ತ್ರ. ಡಿಪ್ಲೊಮಾ:ಕೈ ಬರಹ ಮತ್ತು ಹಸ್ತಾಕ್ಷರ ವಿಶ್ಲೇಷಣೆ, ಅಂತರಾಷ್ಟ್ರೀಯ ಕೈ ಬರಹ ವಿಶ್ಲೇಷಣಾ ಶಾಲೆ,ಕ್ಯಾಲಿಫೋರ್ನಿಯಾ(ಅಮೇರಿಕಾ) ೧೯೭೦ ರಲ್ಲಿ ಬೆಂಗಳೂರಿನ ಸರಕಾರಿ ವಿಜ್ಞಾನ ಮಹಾವಿದ್ಯಾಲಯದಲ್ಲಿ ಅಧ್ಯಾಪಕರಾಗಿ ವೃತ್ತಿಯನ್ನು ಪ್ರಾರಂಭಿಸಿದ ಶ್ರೀಯುತರು ಕರ್ನಾಟಕ ವಿಜ್ಞಾನ ಮಹಾವಿದ್ಯಾಲಯ, ಧಾರವಾಡ. ಕರ್ನಾಟಕ ವಿಶ್ವವಿದ್ಯಾಲಯ ಸ್ನಾತಕೋತ್ತರ ಕೇಂದ್ರ, ಕಲಬುರ್ಗಿ, ಗುಲಬರ್ಗಾ ವಿಶ್ವವಿದ್ಯಾಲಯ, ಕಲಬುರ್ಗಿ, ವಿಭಾಗದ ಮುಖ್ಯಸ್ಥರು, ರಸಾಯನ ಶಾಸ್ತ್ರ, ಗುಲಬರ್ಗಾ ವಿಶ್ವವಿದ್ಯಾಲಯ, ಕಲಬುರ್ಗಿ, ಹಲವು ಸಂಸ್ಥೆಗಳಲ್ಲಿ ಆಹ್ವಾನಿತ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸದ್ದಾರೆ. ಸಂಶೋಧನೆ, ಅನೇಕ ವಿಧ್ಯಾರ್ಥಿಗಳಿಗೆ ಪಿಎಚ್. ಡಿ. ಮಾರ್ಗದರ್ಶನ. ರಾಷ್ಟ್ರೀಯ ಮತ್ತು ಅಂತರ್‌ರಾಷ್ಟ್ರೀಯ ನಿಯತ ಕಾಲಿಕೆಗಳಲ್ಲಿ ಸಂಶೋಧನಾ ಲೇಖನಗಳ ಪ್ರಕಟಣೆ.

### ಶ್ರೀ ಆರ್. ವಸಂತಕುಮಾರ್



ಕಾವ್ಯ, ವಿಮರ್ಶೆ, ಜೀವನಚರಿತ್ರೆ, ಅಂಕಣ ಬರಹ, ಲಲಿತಪ್ರಬಂಧ ಹಾಗೂ ಸಂಶೋಧನಾ ಬರಹಗಳು– ಹೀಗೆ ಸಾಹಿತ್ಯದ ಹಲವಾರು ಪ್ರಕಾರಗಳಲ್ಲಿ ಕೃಷಿ ಮಾಡಿರುವ ಶ್ರೀಯುತರು ವೃತ್ತಿಯಲ್ಲಿ ಕನ್ನಡ ಪ್ರಾಧ್ಯಾಪಕರು. ಹವ್ಯಾಸಿ ಪತ್ರಕರ್ತರಾಗಿರುವ ಇವರು ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕಲೋಕ', ಕರ್ನಾಟಕ ಸಾಹಿತ್ಯ ಅಕಾಡೆಮಿಯ 'ವಾರ್ತಾಪತ್ರ', ಕನ್ನಡ ಸಾಹಿತ್ಯ ಪರಿಷತ್ತಿನ 'ಕನ್ನಡ ನುಡಿ' ಪತ್ರಿಕೆಗಳ ಸಂಪಾದಕರಾಗಿ ಸೇವೆ ಸಲ್ಲಿಸಿದ್ದಾರೆ. ಇದುವರೆಗೂ ಹದಿನಾರು ಸ್ವರಚಿತ ಕೃತಿಗಳು ಹಾಗೂ ಇಪ್ಪತ್ತೈದು ಸಂಪಾದಿತ ಕೃತಿಗಳು ಪ್ರಕಟವಾಗಿವೆ. ಬಹುಮುಖ್ಯ ಕೃತಿಗಳು – ಭಾವನಾ, ಮಣಿದೀಪ, ಶಕಪುರುಷ ಶಿವರಾಮಕಾರಂತ, ಕರ್ನಾಟಕದ ಒಕ್ಕಲಿಗರು, ಮೌನಸಾಧಕ ಎಂ.ಚಂದ್ರಶೇಖರ್, ಸಾಹಿತ್ಯಶೋಧ ಮೊದಲಾದವು. ಆದರ್ಶ ಶಿಕ್ಷಕ ಪ್ರಶಸ್ತಿ, ವಿಶ್ವೇಶ್ವರಯ್ಯ ಸಾಹಿತ್ಯ ರಾಜ್ಯಪ್ರಶಸ್ತಿ, ಕುವೆಂಪು ಕನ್ನಡ ಪ್ರಶಸ್ತಿ ಇನ್ನೂ ಮುಂತಾದವು ಇವರಿಗೆ ಸಂದಿರುವ ಪುರಸ್ಕಾರಗಳಾಗಿವೆ.

### ಡಾ. ಸುಜಾತ



ಕನ್ನಡ ಪ್ರಾಧ್ಯಾಪಕರು ಹದಿನೈದು ವರ್ಷಗಳಿಂದ ಕನ್ನಡ ಬೋಧನೆಯಲ್ಲಿ ತೊಡಗಿದ್ದಾರೆ. ಸೃಜನಶೀಲ, ಕ್ರಿಯಾಶೀಲ ವ್ಯಕ್ತಿತ್ವವನ್ನು ಒಳಗೊಂಡಿದ್ದಾರೆ. ಕನ್ನಡ ಸ್ನಾತಕೋತ್ತರವನ್ನು ಎರಡು ಚಿನ್ನದ ಪದಕಗಳೊಂದಿಗೆ ಪಡೆದಿರುತ್ತಾರೆ. 'ನವೋದಯದ ವಿಮರ್ಶಾ ಸಾಹಿತ್ಯದ ಸ್ವರೂಪ" ಎಂಬ ವಿಷಯವಾಗಿ ಡಾ. ಬಸವರಾಜ ಕಲ್ಗುಡಿ ಅವರ ಮಾರ್ಗದಶನದಲ್ಲಿ ಪಿಎಚ್.ಡಿ. ಪದವಿಯನ್ನು ಪಡೆದಿದ್ದಾರೆ. ಕವಯತ್ರಿ, ನಿರೂಪಕಿ, ಲೇಖಕಿಯೂ ಆಗಿರುವ ಇವರು 'ಬಹುರೂಪಿ ಕಥನ', 'ವ್ಯಾಪ್ತಿ ಪ್ರದೇಶದಿಂದ ಹೊರಗಿದ್ದಾರೆ', 'ಕವನ ಸಂಕಲನ' ವಿಚಾರವಾದಿ ಕುವೆಂಪು ಪುಸ್ತಕಗಳನ್ನು ಬರೆದಿದ್ದಾರೆ. ಹಲವಾರು ಕವಿಗೋಷ್ಠಿ, ವಿಚಾರ ಗೋಷ್ಠಿಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದಾರೆ.

– ೬ನೇ ಪುಟ ನೋಡಿ

ಬಿ.ಆರ್. ರವೀಂದ್ರನಾಥ

ಹಿಂದಿನ ಸಂಚಿಕೆಯಿಂದ

## ಪ್ರತಿಷ್ಠಾನವನ್ನು ಕಟ್ಟಿ ಬೆಳೆಸಿದ ಮಹನೀಯರು ೩

## ಗೊರೂರು ರಾಮಸ್ವಾಮಿ ಅಯ್ಯಂಗಾರ್



ಗೊರೂರು ರಾಮಸ್ವಾಮಿ ಅಯ್ಯಂಗಾರ್ (ಜುಲೈ ೪, ೧೯೦೪ – ಸೆಪ್ಟೆಂಬರ್ ೨೮, ೧೯೯೧) ತಮ್ಮ ಪ್ರಬಂಧ ಲೇಖನಗಳಿಂದ ಕನ್ನಡ ಸಾಹಿತ್ಯದಲ್ಲಿ ಛಾಪು ಮೂಡಿಸಿದವರು. ಆರ್.ಕೆ.ನಾರಾಯಣ್ ಓದುಗರಿಗೆ ಮಾಲ್ಗುಡಿಯನ್ನು ಪರಿಚಯಿಸುವುದಕ್ಕೆ ಮುನ್ನವೇ ತಮ್ಮ ಕೃತಿಗಳ ಮೂಲಕ ರಾಮಸ್ವಾಮಿ ಅಯ್ಯಂಗಾರ್ ರವರು ಗೊರೂರು ಗ್ರಾಮವನ್ನು ಪರಿಚಯಿಸಿದ್ದರು. ಕಾವ್ಯನಾಮ – ಸೀತಾತನಯ . ಸ್ವಾತಂತ್ರ್ಯ ಚಳುವಳಿ, ಮೈಸೂರಿನಲ್ಲಿ ಪ್ರಜಾ ಸರ್ಕಾರಕ್ಕಾಗಿ ಚಳುವಳಿ, ಕರ್ನಾಟಕ ಏಕೀಕರಣ ಚಳುವಳಿಗಳಲ್ಲಿ ಹೋರಾಡಿ ಹರಿಜನೋದ್ಧಾರ ಮತ್ತು ಗ್ರಾಮೋದ್ಧಾರಕ್ಕಾಗಿ ಶ್ರಮಿಸಿದ್ಬ ಅಪ್ರತಿಮ ಗಾಂಧಿವಾದಿ

### ಶಿಕ್ಷಣ/ಜೀವನ ಮತ್ತು ಹೋರಾಟ

ಡಾ.ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರು ೧೯೦೪ರ ಜುಲೈ ೪ರಂದು ಹಾಸನ ಜಿಲ್ಲೆಯ ಗೊರೂರು ಗ್ರಾಮದಲ್ಲಿ ಜನಿಸಿದರು . ಅವರ ತಂದೆ ಶ್ರೀನಿವಾಸ ಅಯ್ಯಂಗಾರ್, ತಾಯಿ ಲಕ್ಷಮ್ಮ. ತಮ್ಮ ಹಳ್ಳಿಯಲ್ಲಿ ಲೋಯರ್ ಸೆಕೆಂಡರಿ ಶಿಕ್ಷಣವನ್ನು ಮುಗಿಸಿದ ಗೊರೂರರು ಹಾಸನದ ಸರ್ಕಾರಿ ಪ್ರೌಢಶಾಲೆಯಲ್ಲಿ ವ್ಯಾಸಂಗ ಮಾಡುತ್ತಿದ್ದಾಗ ಗಾಂಧೀಜಿಯವರ ಅಸಹಕಾರ ಚಳುವಳಿಯಿಂದ ಆಕರ್ಷಿತರಾಗಿ ಶಿಕ್ಷಣಕ್ಕೆ ವಿದಾಯ ಹೇಳಿದರು. ಅನಂತರ ಅವರು ಗಾಂಧೀಜಿಯ ಆಶ್ರಮವನ್ನು ಸೇರಿ, ಗುಜರಾತಿನ ವಿದ್ಯಾಪೀಠದ ವಿದ್ಯಾರ್ಥಿಯಾದರು. ಬಳಿಕ ಮದ್ರಾಸಿನ 'ಲೋಕಮಿತ್ರ' ಮತ್ತು 'ಭಾರತಿ' ಪತ್ರಿಕೆಗಳ ಕನ್ನಡ ಸಮಾಚಾರ ಲೇಖಕರಾಗಿ ಸ್ವಲ್ಪಕಾಲ ಕೆಲಸಮಾಡಿ, ಕೆಂಗೇರಿಯ ಗುರುಕುಲಾಶ್ರಮವನ್ನು ಸೇರಿದರು. ಹರಿಜನೋದ್ಧಾರ ಅದರ ಮುಖ್ಯ ಕಾರ್ಯವಾಗಿತ್ತು. ಅದನ್ನು ಗೊರೂರರು ಶ್ರದ್ಧೆಯಿಂದ ನಿರ್ವಹಿಸಿದರು. ಆಮೇಲೆ ಬೆಂಗಳೂರಿನ ಅಖಿಲ ಭಾರತ ಚರಕ ಸಂಘದ ಖಾದಿ ವಸ್ತ್ರಾಲಯದ ಸಂಚಾಲಕರಾದರು. ಅಲ್ಲಿಯೇ ಅವರ ಸಾಹಿತ್ಯ ಸೇವೆ ಮೊದಲಾಯಿತು. ೧೯೩೩ರಲ್ಲಿ ಗೊರೂರರು ತಮ್ಮ ಗ್ರಾಮಕ್ಕೆ ಮರಳಿ, ಮೈಸೂರು ಗ್ರಾಮ ಸೇವಾಸಂಘವನ್ನು ಸ್ಥಾಪಿಸಿ, ಖಾದಿ ಪ್ರಚಾರ, ಹರಿಜನೋದ್ಧಾರ, ವಯಸ್ಕರ ಶಿಕ್ಷಣ, ಗ್ರಾಮ ಕೈಗಾರಿಕೆಗಳು ಮುಂತಾದ ರಚನಾತ್ಮಕ ಚಟುವಟಿಕೆಗಳಲ್ಲಿ ತೊಡಗಿದರು. ೧೯೪೨ರ 'ಚಲೇ ಜಾವ್' ಚಳವಳಿಯಲ್ಲಿ ಅವರು ಭಾಗವಹಿಸಿ, ತುರಂಗವಾಸವನ್ನು ಅನುಭವಿಸಿದರು. ಸ್ವಾತಂತ್ರ್ಯ ಬಂದ ಮೇಲೆ ಮೈಸೂರಿನಲ್ಲಿ ಪ್ರಜಾ ಸರ್ಕಾರ ಸ್ಥಾಪನೆಗಾಗಿ ನಡೆದ ಚಳವಳಿಯಲ್ಲೂ ಭಾಗವಹಿಸಿದರು. ಅದು ಸ್ಥಾಪಿತವಾದ ಮೇಲೆ ಸುಮಾರು ಹನ್ನೆರಡು ವರ್ಷಗಳ ಕಾಲ ರಾಜ್ಯದ ವಿಧಾನಪರಿಷತ್ತಿನ ಸದಸ್ಯರಾಗಿದ್ದರು. ಈ ಅವಧಿಯಲ್ಲಿ ಕರ್ನಾಟಕದ ಏಕೀಕರಣಕ್ಕಾಗಿ ಅವರು ದುಡಿದರು.[೨]

### ಕರ್ನಾಟಕ ಏಕೀಕರಣ ಚಳುವಳಿ

* ಸ್ವಾತಂತ್ರ್ಯ ಹೋರಾಟ ಹಾಗೂ ಕರ್ನಾಟಕ ಏಕೀಕರಣ ಚಳವಳಿಗಳಲ್ಲಿ ಸಕ್ರಿಯವಾಗಿ ಭಾಗವಹಿಸಲು ತುಮಕೂರಿನ ವಿದ್ಯಾರ್ಥಿಗಳು ೧೯೪೧ರಲ್ಲಿ ಸ್ಥಾಪಿಸಿಕೊಂಡಿದ್ದ ಸಂಘಟನೆ – ಸನ್ಮಿತ್ರ ಸಂಘ. ೧೬ನೆಯ ಡಿಸೆಂಬರ್ ೧೯೪೫, ಭಾನುವಾರ ಸಂಜೆ ತುಮಕೂರಿನ ಕೃಷ್ಣರಾಜ ಪುರಭವನದಲ್ಲಿ ನಡೆದ ಸನ್ಮಿತ್ರ ಸಂಘದ ಸಭೆಯಲ್ಲಿ ಗೊರೂರು ಅನುಮೋದಿಸಿದ ಗೊತ್ತುವಳಿ ಇಂತಿದೆ:

* ಕನ್ನಡ ನಾಡಿನ ಏಕೀಕರಣಕ್ಕೆ ಸೇರಿರುವ ಈ ಸಭೆಯು, ಸಮಸ್ತ ಕನ್ನಡಿಗರೂ ಕರ್ನಾಟಕ ಏಕೀಕರಣವು ಕಾರ್ಯಕಾರಿಯಾಗಿ ರೂಪುಗೊಳ್ಳುವಂತೆ ಪೂರ್ಣ ಪ್ರಯತ್ನ ಮಾಡಬೇಕೆಂದು ಕನ್ನಡಿಗರನ್ನು ಬೇಡುತ್ತದೆ. ಕಾಂಗ್ರೆಸ್ಸಿನಿಂದ ಅಂಗೀಕೃತವಾದ ಈ ತತ್ತ್ವವನ್ನು ಕೂಡಲೇ ಕಾರ್ಯಕಾರಿಯಾಗಿ ಮಾಡಬೇಕೆಂದು ಬ್ರಿಟಿಷ್ ಸರ್ಕಾರವನ್ನು ಒತ್ತಾಯಪಡಿಸುತ್ತದೆ.'

### ಸಾಹಿತ್ಯ ಸೇವೆ

### ಕೃತಿಗಳು

ಆರು ಕಾದಂಬರಿಗಳು, ಎರಡು ಕಥೆಗಳು, ಮೂರು ಅನುವಾದಗಳು ಹಾಗೂ ಒಂದು ಸಂಕಲನದ ಸಂಪಾದಕತ್ವ

### ಪ್ರಶಸ್ತಿ, ಗೌರವಗಳು

* ೧೯೭೪ರಲ್ಲಿ ಮೈಸೂರು ವಿಶ್ವವಿದ್ಯಾಲಯವು ಗೌರವ ಡಾಕ್ಟರೇಟ್ ನೀಡಿ ಸನ್ಮಾನಿಸಿತು.
* ೧೯೮೦ರಲ್ಲಿ ಅಮೇರಿಕಾದಲ್ಲಿ ಗೊರೂರು ಕೃತಿಗೆ ಕೇಂದ್ರ ಸಾಹಿತ್ಯ ಅಕಾಡಮಿ ಪ್ರಶಸ್ತಿ ಲಭಿಸಿತು.
* ೧೯೮೨ರಲ್ಲಿ ಶಿರಸಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು.
* ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ
* ಅಖಿಲ ಕರ್ನಾಟಕ ಜಾನಪದ ಸಮ್ಮೇಳನದ ಅಧ್ಯಕ್ಷತೆ
* ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ
* ೧೯೯೫ರಲ್ಲಿ ಕರ್ನಾಟಕ ರಾಜ್ಯ ಚಲನಚಿತ್ರ ಅತ್ಯುತ್ತಮ ಕಥಾಲೇಖಕ ಪ್ರಶಸ್ತಿ : "ಊರ್ವಶಿ" ಚಿತ್ರಕ್ಕಾಗಿ (ಮರಣೋತ್ತರ)
* ದೇವರಾಜ ಬಹದ್ದೂರ್ ಪ್ರಶಸ್ತಿ
* ಅಭಿಮಾನಿಗಳು ಅರ್ಪಿಸಿದ ಗ್ರಂಥ– ಗೊರೂರು ಗೌರವ ಗ್ರಂಥ, ಸಂಸ್ಮರಣ ಗ್ರಂಥ , ಹೇಮಾವತಿಯ ಚೇತನ. (ಮಾಹಿತಿ ವಿಕಿಪೀಡಿಯಾ)



# ಪದಚರಿತೆ



**ಒಂದಷ್ಟು ಪದಗಳ ಮೂಲಚೂಲಗಳ ಹುಡುಕಾಟ**

– ಡಾ. ಪಿ.ವಿ. ನಾರಾಯಣ

**ಮರ೨:** ಮರ ಶಬ್ದವನ್ನು ಕಾಷ್ಠ, ಒಣಮರದ ತುಂಡು ಎಂಬರ್ಥದಲ್ಲಿಯೂ ಬಳಸುತ್ತೇವೆ, "ಅಱಿದಿದಾರ್ಪುದೆನ್ನದೆ ತಗುಳ್ದು ಮರಂಗಳನೊಟ್ಟಿ" ಎಂಬುದು 'ಸುಕುಮಾರಚರತೆ' ಕಾವ್ಯದ ಸಾಲು. "ಕೀಲಂ ಬೆಟ್ಟಿರ್ದ ಮರನಂ ಕಂಡದಱ ಮೇಲೆ ಕುಳ್ಳಿರ್ದು" ಎಂಬುದು 'ಪಂಚತಂತ್ರ'ದ ಸಾಲು. ಈ ಶಬ್ದವು ಅನೇಕ ಭಾವಗಳನ್ನು ಸೂಚಿಸಲು ಬಳಕೆಯಾಗಿದೆ. "ಮರದೊಳಗಣ ಮಂದಾಗ್ನಿಯ ಉರಿಯದಂತಿರಿಸಿದೆ" ಎಂಬಲ್ಲಿ ಜೇಡರ ದಾಸಿಮಯ್ಯ ವಿಸ್ಮಯವನ್ನು ಸೂಚಿಸಿದರೆ, "ಮರದೊಳಗಣ ಕಿಚ್ಚು ಮರನ ಸುಟ್ಟಂತಾದೆನಯ್ಯಾ" ಎಂಬ ಅಲ್ಲಮಪ್ರಭುವಿನ ಮಾತು ಲಿಂಗಪೂಜೆಯ ಪರಿಣಾಮವನ್ನು ಹೇಳಲು ಬಳಕೆಯಾಗಿದೆ.

"ಮರಮರ ಮಥನಿಸಿ ಕಿಚ್ಚು ಹುಟ್ಟಿ" ಎಂಬ ಮಹಾದೇವಿಯಕ್ಕನ ವಚನದ ಸಾಲಿನಲ್ಲಿ ಮರದ ತುಂಡುಗಳನ್ನು ಉಜ್ಜಿಯೋ ಕಡೆದೋ ಬೆಂಕಿ ಮಾಡಿಕೊಳ್ಳುತ್ತಿದ್ದ ಅರ್ಥವಿದೆ. ಮರದಿಂದ ಅನೇಕ ವಸ್ತುಗಳನ್ನು ಮಾಡಿಕೊಳ್ಳುವ ರೂಢಿ ಹಿಂದಿನದು. ಮರಗೋಲಿನ ಉಲ್ಲೇಖ 'ಧರ್ಮಾಮೃತ'ದಲ್ಲಿದೆ: "ಜಾತ್ಯಶ್ವಮಂ ಬಿಟ್ಟು ಮರಗಾಲಂ ಕೊಳ್ವ." ಬಸವಣ್ಣನೂ ಇದನ್ನು ಉಲ್ಲೇಖಿಸುತ್ತಾನೆ: "ಮರಗಾಲಲಟ್ಟಿ ಸದೆದು ನೋಡಯ್ಯಾ." ಮರದಿಂದ ಮಾಡಿದ ಮುಖವಾಡವನ್ನು 'ಮರಮೊಗ' ಎಂಬ ಶಬ್ದದಿಂದಲೇ ಕರೆಯುತ್ತಿದ್ದರು. "ಲೋಗರ್ ಪಗರಣಿಗರಾಗಿ ಎನಿತಾನುಂ ತೆಱದ ರೂಪುಗಳುಮಂ ಕೈಕೊಂಡು ಮರಮೊಗಂಗಳನಿಟ್ಟು" ಎಂಬುದು 'ವಡ್ಡಾರಾಧನೆ'ಯಲ್ಲಿನ ಮಾತು. ಮರವಾಳ್ ಎಂದರೆ ಮರದ ಕತ್ತಿ: "ಕರವಾಳಂ ಮಸೆವಂದದೆ ಮರವಾಳಂ ಮಸೆಯೆ ಕೂರಿತಮಕ್ಕುಮೇ" –'ಗದಾಯುದ್ಧ'. ಮರದ ಬಿಲ್ಲೇ 'ಮರವಿಲ್': "ತೆ–ಱಟ್ಟ ಎಕ್ಕವಡಂ ಮರವಿಲ್ ಕಟ್ಟಿದ ಪಣೆಕಟ್ಟು" – 'ಪಂಪಭಾರತ'. ಮರವನ್ನು ಪೂರ್ವಪದವಾಗಿಟ್ಟುಕೊಂಡು ಅನೇಕ ನುಡಿಗಟ್ಟುಗಳು ರಚಿತವಾಗಿವೆ. 'ಮರಗಟ್ಟಲೆ'ಯಲ್ಲಿನ 'ಮರ' ಹಳೆಯ ಕಾವ್ಯಗಳಲ್ಲಿ ದಟ್ಟತೆಯನ್ನು ಸೂಚಿಸುತ್ತದೆ: "ತುಱುಗೆದೆಗಣ್ಣ ಕಾಂತಿ ಮರಗಟ್ಟಲೆಯಂ ಬೆದಱಿಟ್ಟೆ" ಎಂಬುದು 'ಜಗನ್ನಾಥವಿಜಯ' ಸಾಲು. 'ಮರವಡು' ಎಂದರೆ ಮರದಂತೆ ಸ್ತಬ್ಧವಾಗು ಎಂದು: "ಅಂತಃಪೀಡಾಕ್ರಾಂತಿಯನೊಂದಿನಿತು ಪೊಟ್ಟು ಮರವಟ್ಟಿರ್ದಳ್" ಎಂಬುದು 'ಕರ್ಣಾಟಕ ಕಾದಂಬರಿ'ಯಲ್ಲಿನ ವರ್ಣನೆ. ಬಿರುಸನ್ನು ಸೂಚಿಸಲೂ ಮರ ಬಳಕೆಯಾಗಿದೆ: ಮರಗೆಣಸು, ಮರಗಬ್ಬು ಇತ್ಯಾದಿ. ಮರಗಟ್ಟು ಎಂದರೆ ಜೋಮು ಹಿಡಿ; ನಾಲಗೆ ಮರವಾಗು ಎಂದರೆ ರುಚಿಯಿಲ್ಲದಾಗು ಎಂದರ್ಥ ಇತ್ಯಾದಿ.

=====

**ಮರುಗು:** ಇದರ ಮೂಲ ರೂಪ ಮಱುಗು ಎಂದು; ಇದೊಂದು ದ್ರಾವಿಡದ ಕ್ರಿಯಾಪದ, ತಮಿಳಿನಲ್ಲಿ ಮಱುಕು (ತಮಿಳಿನಲ್ಲಿ ಪದಮಧ್ಯದ 'ಕ' ವು 'ಗ' ಎಂದೇ ಉಚ್ಚಾರವಾಗುತ್ತದೆ), ತೆಲುಗಿನಲ್ಲಿ ಮಱುಗು ಹಾಗೂ ತುಳುವಿನಲ್ಲಿ ಮರ್ಕುನಿ ಎಂಬ ರೂಪಗಳಲ್ಲಿ ದೊರೆಯುತ್ತದೆ. ಇದರ ಮೂಲಾರ್ಥ ಕುದಿ, ಮರಳು ಎಂಬುದು. "ಮಱುಗುವ ಪಾಲ್ಗೆ ಅಳೆಯ ಪನಿಗಳಂ ಬೆರೆಸಿದವೋಲ್" (ಅಳೆ=ಮಜ್ಜಿಗೆ) ಎಂಬ ಉಪಮೆ ಕವಿರಾಜಮಾರ್ಗದಲ್ಲಿಯೇ ಇದೆ. ಇದು ಮುಂದೆ ರೂಪಕವಾಗಿ ಮಾನಸಿಕವಾಗಿ ಕುದಿಯುವುದಕ್ಕೆ, ಅಂದರೆ ಕಳವಳಗೊಳ್ಳುವುದಕ್ಕೆ ಅನ್ವಯವಾಯಿತು. "ಮಗನಟಿಲೊಳ್ ಕರಂ ಮಱುಗುತ್ತಿರ್ಪಿನಂ" ಎಂಬುದು ಪಂಪಭಾರತದ ಮಾತು. ಈ ಅರ್ಥವೂ ವಿಸ್ತಾರಗೊಂಡು ಬೇರೆಯವರ ದುಃಖ ಕಂಡು ಪಡುವ ಸಹಾನುಭೂತಿಗೂ ಅನ್ವಯಿಸುವಂತಾಯಿತು, "ಸುಧನ್ವಂಗೆ ಮಱುಗುವಂತೆ ಸಚಿವನಿಂತೆಂದಂ" ಎಂಬುದು ಜೈಮಿನಿ ಭಾರತದ ಮಾತು. ಈ ಅರ್ಥ ಮುಂದೆ ಪ್ರೀತಿಸು ಎಂಬರ್ಥವನ್ನೂ ಪಡೆಯುತ್ತದೆ; 'ಶಬ್ದಮಣಿದರ್ಪಣ'ದಲ್ಲಿ "ಮಱುಗಿದಂ–ಕೂರ್ತಂ" ಎಂದು ಅರ್ಥ ಕೊಡಲಾಗಿದೆ.

ಪ್ರೇರಣಾರ್ಥದಲ್ಲಿ ಎಂದರೆ ಕುದಿಯುವ ಹಾಗೆ ಮಾಡು ಎಂಬರ್ಥದಲ್ಲಿ ಇದು ಮಱುಗಿಸು ಎಂಬ ರೂಪ ಪಡೆಯುತ್ತದೆ. "ಪಾಲಂ ಅರ್ಥಮಪ್ಪಿನಂ ಮಱುಗಿಸಿ" ಎಂಬ ಸಾಲು 'ಲೋಕೋಪಕಾರ'ದಲ್ಲಿದೆ. ಇದೂ ಮಾನಸಿಕವಾಗಿ ಕೋಟಲೆಗೊಳಿಸು ಎಂಬರ್ಥವನ್ನು ಪಡೆಯುತ್ತದೆ: "ಮನುಷ್ಯಜನ್ಮಮಂ ಮಱುಗಿಸಿ ನಿನ್ನೀ ಪದಕೆ ತಂದುದು ಮುನ್ನಿನ ಗೆಯ್ದ ದೋಷಂ" ಎಂಬ ವಾಕ್ಯ ಕಮಲಭವ ಎಂಬ ಕವಿಯ 'ಶಾಂತೀಶ್ವರ ಪುರಾಣ'ದಲ್ಲಿದೆ.

ಇದರ ನಾಮರೂಪವೇ ಮಱುಕ ಅಥವಾ ಈಗಿನ ಮರುಕ, ಅಂದರೆ ಕುದಿಯುವಿಕೆ. ಹಿಂದೆ ಹೇಳಿದ 'ಲೋಕೋಪಕಾರ'ದಲ್ಲಿ ಈ ಶಬ್ದ ಇದೇ ಅರ್ಥದಲ್ಲಿ ಬಳಕೆಯಾಗಿದೆ. ಇಂತಹ ಮಾನಸಿಕ ಸ್ಥಿತಿಯೂ ಮರುಕವೇ, ದುಃಖ, ತಳಮಳ ಎಂದು. "ಮಱುಕಂ ಅಮಾಯಮಪ್ಪ ಅಪಮೃತ್ಯುವೆಂಬಲ್ಲಿಗೆ ಪೊಱಗೆ" ಎಂಬ ಮಾತು ಪಂಪನ 'ಆದಿಪುರಾಣ'ದಲ್ಲಿದೆ. ಈ ಅರ್ಥ ಮತ್ತಷ್ಟು ವಿಸ್ತಾರಗೊಂಡು ಸಹಾನುಭೂತಿಪರವಾದ ಕಳವಳಕ್ಕೂ ಅನ್ವಯಿಸಿ ಕರುಣೆ ಎಂಬರ್ಥವನ್ನು ಪಡೆಯುತ್ತದೆ. ವ್ಯಾಮೋಹ ಎಂಬರ್ಥದಲ್ಲಿ ಮಱುಕ ಎಂಬ ಶಬ್ದವು 'ಕರ್ಣಾಟಕ ಕಾದಂಬರಿ'ಯಲ್ಲಿ ಬಳಕೆಗೊಂಡಿದೆ.

=====

**ಶ್ರೀ ಬಿ.ಎಸ್. ಗೋಪಾಲರಾವ್ ಮತ್ತು ಶ್ರೀಮತಿ ವೇದವತಿಬಾಯಿ ಸ್ಮಾರಕ ದತ್ತಿ**

ದತ್ತಿ ದಾನಿ– ದಿ॥ ಶ್ರೀಮತಿ ಬಿ.ಜಿ.ಕುಸುಮ ಅವರ ಪರಿಚಯ

ಸಾಹಿತ್ಯ–ಸಂಸ್ಕೃತಿ ಪ್ರಿಯರಾದ ತಮ್ಮ ತಂದೆ ತಾಯಿಯರವರ ಸ್ಮರಣಾರ್ಥ ಜನವರಿ ತಿಂಗಳಲ್ಲಿ ಗಮಕ ವಾಚನ ಮತ್ತು ವ್ಯಾಖ್ಯಾನ ಕಾರ್ಯಕ್ರಮವನ್ನು ಏರ್ಪಡಿಸ ಬೇಕೆಂದು ಶ್ರೀಮತಿ ಬಿ.ಜಿ.ಕುಸುಮ ಮತ್ತು ಒಡಹುಟ್ಟಿದವರು ಸೇರಿ ಈ ದತ್ತಿ ಸ್ಥಾಪನೆಯನ್ನು ಸ್ಥಾಪಿಸಿದ್ದಾರೆ. ವಿಜ್ಞಾನ ಶಿಕ್ಷಣದಲ್ಲಿ ಅತೀವ ಶ್ರದ್ಧೆ ಮತ್ತು ಕಲೆಯಲ್ಲಿ ಅಪಾರ ಆಸಕ್ತಿ ಇವೆರಡರ ಸಾಂಗತ್ಯಕ್ಕೆ ಬಿ.ಜಿ.ಕುಸುಮಾ ಅವರ ವ್ಯಕ್ತಿತ್ವವೇ ಒಂದು ಉತ್ತಮ ಉದಾಹರಣೆ. ಲೋಕದ ಆಗುಹೋಗುಗಳನ್ನು ವೈಚಾರಿಕ ದೃಷ್ಟಿಕೋನದಿಂದ ವಿಶ್ಲೇಷಿಸುವ ಎಚ್ಚರ ಮತ್ತು ಸಾಹಿತ್ಯ, ಸಂಗೀತ, ಗಮಕ ಇವುಗಳನ್ನು ಅಸ್ವಾದಿಸುವ ಸಂವೇದನೆ ಇವೆರಡರ ಹದವರಿತ ಮಿಶ್ರಣ ಅಲ್ಲಿ ಹಾಸುಹೊಕ್ಕಾಗಿದೆ. ಕಳೆದ ಇಪ್ಪತ್ತೈದು ವರ್ಷಗಳಿಂದಲೂ ಪ್ರತಿಫಲಾಪೇಕ್ಷೆಯಿಲ್ಲದೆ ಬೆಂಗಳೂರಿನಲ್ಲಿ ಮಕ್ಕಳಿಗೆ ಬೇಸಿಗೆ ವಿಜ್ಞಾನ ಶಿಬಿರಗಳನ್ನು ನಿರಂತರ ನಡೆಸುತ್ತಿರುವ ಅವರ ಬದ್ಧತೆ, ನಾಳೆಯ ಪೀಳಿಗೆಯಲ್ಲಿ ವೈಜ್ಞಾನಿಕ ಮನೋಭಾವವನ್ನು ಬಿತ್ತುವ ಹಂಬಲ ಹೊಂದಿದೆ. ಹಾಗೆಯೇ ಪ್ರಸಿದ್ಧ ಗಮಕಿಗಳ ಕಾವ್ಯವಾಚನಕ್ಕೆ ವ್ಯಾಖ್ಯಾನ ಮಾಡುವ ಅವರ ಆಸಕ್ತಿ, ಕನ್ನಡದ ಶ್ರೇಷ್ಠ ಕೃತಿಗಳ ಸಾರವನ್ನು ಶ್ರೀ ಸಾಮಾನ್ಯರಿಗೂ ತಲುಪಿಸುವ ಆಶಯ ಹೊಂದಿದೆ.

ಸಮಾಜದಲ್ಲಿ ಬಡ ಹೆಣ್ಣುಮಕ್ಕಳ ಶಿಕ್ಷಣಕ್ಕೆ, ಮಹಿಳೆಯರ ಆರೋಗ್ಯ ರಕ್ಷಣೆಗೆ ಸ್ಪಂದಸಲೆಂದೇ ಅವರು ಒಂದು ಸಾಮಾಜಿಕ ಸೇವಾ ಟ್ರಸ್ಟ್ ಸ್ಥಾಪಿಸಿದ್ದಾರೆ. ಜನಸೇವೆ ಮಾಡುವ ಆಸ್ಪತ್ರೆಗಳ ಅಗತ್ಯಕ್ಕೆ ನೆರವಾಗುತ್ತಿದ್ದಾರೆ. ವಿಜ್ಞಾನ ವಿಷಯಗಳನ್ನು ಕುರಿತು ಸರಳ ಭಾಷೆಯಲ್ಲಿ ಲೇಖನಗಳನ್ನು ಬರೆಯುವ ಅವರು ಕನ್ನಡ ಮಹಾಕಾವ್ಯಗಳ ರಸಪ್ರಸಂಗಗಳನ್ನು ನಮ್ಮ ಮುಂದಿಟ್ಟದ್ದಾರೆ. ಮಕ್ಕಳ ಕಥೆಗಳ ಅವರ ಎರಡು ಸಂಗ್ರಹಗಳು. ಬದುಕಿಗೆ ಬೇಕಾದ ಸಂಗತಿಗಳನ್ನು ತಿಳಿಸಿಕೊಡುತ್ತವೆ. ಕುಸುಮಾ ಅವರ ಬಹುಮುಖ ಆಸಕ್ತಿಗೆ 'ವ್ಯಾಖ್ಯಾನ ವಿಶಾರದೆ' ಬಿರುದು, ಗಾರ್ಗಿ ಪ್ರಶಸ್ತಿ, ಎನ್‌ಸಿಇಆರ್‌ಟಿ ಪ್ರಶಸ್ತಿ, ಮುಂತಾದವು ಸಂದಿವೆ.



# ಎಂ.ವಿ.ಸಿ.
# ಬದುಕು ಬರಹ – ೨೩

– ಡಾ. ಪಿ.ವಿ. ನಾರಾಯಣ

HONGANASU KANNADA MONTHLY
RNI No. KAR/KAN/2015/64049
REGISTERED
Post office Registration No.RNP/KA/BGS/2229/2021-2023
dt. 28-12-2020
Office of Posting: Bangalore PSO, Bangalore 560026
Price : Annual Subscription Rs. 20/-
Date of publishing and Posting : 30-12-2021

ಹಿಂದಿನಸಂಚಿಕೆಯಿಂದ

## ಕಥನಸಾಹಿತ್ಯ – ಸಣ್ಣಕತೆ

ಆಧುನಿಕ ಸಣ್ಣಕತೆಗಳ ಆರಂಭಕಾರರೆಂದರೆ ಪಂಜೆ ಮಂಗೇಶರಾಯರು, ಕೆರೂರು ವಾಸುದೇವಾಚಾರ್ಯ ಅವರುಗಳಾದರೂ, ಆ ಪ್ರಕಾರಕ್ಕೊಂದು ಸ್ಪಷ್ಟರೂಪ ಪ್ರಾಪ್ತವಾದುದು 'ಶ್ರೀನಿವಾಸ' ಕಾವ್ಯನಾಮದ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯ–ರಿಂದ ಎಂಬುದು ಈಗಾಗಲೇ ಸಿದ್ಧವಾಗಿರುವ ಮಾತು. ೧೯೪೦ ರಲ್ಲಿ ಪ್ರಕಟವಾದ ಎಂ.ವಿ. ಸೀತಾರಾಮಯ್ಯನವರ 'ಮಾರ್ಗದರ್ಶಕ' ಎಂಬ ಹೆಸರಿನ ಮೊದಲ ಕಥಾಸಂಕಲನದ ಮುನ್ನುಡಿಯಲ್ಲಿ ದ. ರಾ. ಬೇಂದ್ರೆಯವರು "'ಶ್ರೀನಿವಾಸ'ರ ರಂಗಪ್ಪನು ಮದುವೆಯಾಗಿ, ದೀವಳಿಗೆ ಮಾಡಿಕೊಂಡು, ಕೋರ್ಟ್‌ಶಿಪ್ ನಡೆಸಿದಂದಿನಿಂದ ಕನ್ನಡ ಸಂಸಾರವು ಬಹುಮುಖವಾಗಿ ಮಾತನಾಡುತ್ತಿದೆ" ಎಂದು ರಮ್ಯವಾಗಿ ಹೇಳಿರುವುದು ಈ ಅಂಶವನ್ನೇ. ಆ ಮುಂದಿನ ಪೀಳಿಗೆಯ ಸಣ್ಣಕತೆಗಾರರಲ್ಲಿ ಎಂವಿಸೀ ಅವರದ್ದೂ ಬಹು ಮುಖ್ಯ ಪಾತ್ರ. ಅವರು ಸ್ವಂತ ಕತೆಗಳನ್ನಲ್ಲದೆ, ಅಲೆಕ್ಸಾಂಡರ್ ಪುಷ್ಕಿನ್, ನದೇನಿಯಲ್ ಹಾದಾರ್ನ್, ಮ್ಯಾಕ್ಸಿಂ ಗಾರ್ಕಿ, ಕೊಸಿಮೊ ಗ್ರೆಗರಿ ಅವರುಗಳ ಕತೆಗಳನ್ನೂ ಅನುವಾದಿಸಿದ್ದಾರೆ. ಸ್ವಂತ ಕತೆಗಳ ಸಂ–ಖ್ಯೆ, ಯಾವ ಸಂಕಲನದಲ್ಲೂ ಸೇರಿರದ ಎರಡನ್ನೂ ಸೇರಿಸಿಕೊಂಡರೆ, ಎಪ್ಪತ್ತೈದು; ಎರಡು ಸಂಕಲನಗಳಲ್ಲಿ ಅನುವಾದಿತ ಕತೆಗಳಿವೆ. ಅವರ ಸ್ವಂತ ಕಥಾಸಂಕಲನಗಳೆಂದರೆ, 'ಮಾರ್ಗದರ್ಶಕ' (೧೯೪೦), 'ರತಿದೇವಿ ಮತ್ತು ಇತರ ಕಥೆಗಳು' (೧೯೪೫), 'ಬಿಸಿಲು ಬೆಳದಿಂಗಳು' (೧೯೫೩), 'ಕರುಣಾಲಹರಿ' (೧೯೫೫), 'ಜೀವನ ನಾಟಕ' (೧೯೬೧) ಮತ್ತು 'ನಿಲ್ದಾಣಗಳ ನಡುವೆ' (೧೯೭೪). ಅನುವಾದಿತ ಕತೆಗಳನ್ನೂ ಸೇರಿಸಿಕೊಂಡರೆ ಎಂವಿಸೀ ಅವರ ಕತೆಗಳು ಸುಮಾರು ನೂರರಷ್ಟಾಗಬಹುದು. ೧೯೩೦ ರಲ್ಲಿ ಬರೆದ 'ನಂಬಿದರೆ ನಂಬಿ ಬಿಟ್ಟರೆ ಬಿಡಿ' ಯಿಂದ ಪ್ರಾಯಶಃ ೧೯೭೦ ರಲ್ಲಿ ರಚಿತವಾದ ಕೊನೆಯ ಕತೆ 'ಅಂಚೆ ಅನಂತಯ್ಯ'ನವರೆಗೆ ಅವರು ಸಣ್ಣ ಕತೆ–ಗಾರರಾಗಿ ಕ್ರಿಯಾಶೀಲರಾಗಿದ್ದದ್ದು ನಲವತ್ತು ವರ್ಷಗಳಷ್ಟು ದೀರ್ಘ ಕಾಲ. ಅವರ ಕಥಾರಚನಾ ಕಾಲವೂ ಕಿರಿದಲ್ಲ, ಬರೆದ ಕತೆಗಳ ಸಂ–ಖ್ಯೆಯೂ ಸಣ್ಣದಲ್ಲ; ಗುಣಮಟ್ಟವೂ ಕೆಳದರ್ಜೆಯದಲ್ಲ.

ಎಂವಿಸೀ ಪ್ರಾಧ್ಯಾಪಕರೂ ವಿಮರ್ಶಕರೂ ಆಗಿದ್ದುದ–ರಿಂದ ಅವರು ಎಲ್ಲ ಸಾಹಿತ್ಯ ಪ್ರಕಾರಗಳ ತಾತ್ವಿಕತೆಯನ್ನು ಕುರಿತು ಆಲೋಚಿಸಿದ್ದರು, ವ್ಯಾಸಂಗಮಾಡಿದ್ದರು. ೧೯೬೨ ರಲ್ಲಿ ಅವರು ಆಕಾಶವಾಣಿಯ ಪ್ರಸಾರ ಭಾಷಣವೊಂದಕ್ಕೆ ಆರಿಸಿಕೊಂಡಿದ್ದ ವಿಷಯ 'ಕನ್ನಡ ಸಣ್ಣಕಥೆಗಳ ಬೆಳವಣಿಗೆ – ಸ್ವಾತಂತ್ರ್ಯಪೂರ್ವದಲ್ಲಿ' ಎಂಬುದಾಗಿತ್ತು. ಅದರಲ್ಲಿ ತಾವು ಆರಿಸಿಕೊಂಡ ಕಾಲಘಟ್ಟದ ಕನ್ನಡ ಸಣ್ಣ ಕಥೆಗಾರರ ಕೃತಿಸಮೀಕ್ಷೆ ಮಾಡಿಕೊಡುವುದರ ಮುನ್ನ ಲೇಖಕರು ಸಣ್ಣಕಥೆಗಳ ಸ್ವರೂಪದ ಬಗ್ಗೆ ಕೆಲವು ಮಾತುಗಳನ್ನಾಡಿದ್ದಾರೆ. ಅವರ ಪ್ರಕಾರ "ಸಣ್ಣಕಥೆಯ ಪ್ರಪಂಚ ಸಣ್ಣದು: ಆದರೂ ಸ್ವಯಂಪರಿಪೂರ್ಣ; ಇಲ್ಲಿ ಕಥೆಗಾರನಿಗೆ ಕಾದಂಬರಿಕಾರನಿಗೆ ಇರುವ ಸ್ವಾತಂತ್ರ್ಯವಿಲ್ಲ ಸಣ್ಣಕಥೆಯಲ್ಲಿ ಯಾವ ಒಂದು ವಿವರವೇ ಆಗಲಿ, ವರ್ಣನೆಯೇ ಆಗಲಿ, ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಕಥೆಯ ಒಟ್ಟಿನ ಪರಿಣಾಮಕ್ಕೆ ಪೋಷಕವಾಗಿರಬೇಕು. ಹೆಚ್ಚಿನ ವಿವರಣೆಗೆ ಹೋಗದೆ, ಸಣ್ಣಕಥೆ–ಯ ಮುಖ್ಯ ಲಕ್ಷಣಗಳನ್ನು ಹೀಗೆ ಸಂಗ್ರಹಿಸಬಹುದು: (೧) ಸಂಕ್ಷಿಪ್ತತೆ, (೨) ಕಲಾಪರಿಪೂರ್ಣತೆ (ಎಂದರೆ ಸುಸಂಗತವಾದ ಆದಿ–ಮಧ್ಯ–ಅಂತ್ಯಗಳನ್ನು ಹೊಂದಿರುವುದು, (೩) ಒಂದೇ ವಿಷಯದ (ಎಂದರೆ ಪಾತ್ರ, ಘಟನೆ, ವಿಚಾರ, ಸನ್ನಿವೇಶ ಇತ್ಯಾದಿಗಳ) ಪ್ರತಿಪಾದನೆ, (೪) ಪರಿಣಾಮೈಕ್ಯತೆ, (೫) ಕಥನದಲ್ಲಿ ಮಿತವ್ಯಯ, (೬) ಸ್ವಾಭಾವಿಕತೆ ಅಥವಾ ವಾಸ್ತವಿಕತೆ, ಈ ಲಕ್ಷಣಗಳೆಲ್ಲವನ್ನು ಹೊಂದಿದ್ದರೆ, ಸಣ್ಣಕಥೆ ಸ್ವಯಂಪರಿಪೂರ್ಣವಾದ ಸಹಜ ಸುಂದರವಾದ ಕಿರಿಯ ಕಲಾಕೃತಿ ಎನಿಸುತ್ತದೆ."

ಎಂವಿಸೀ 'ಸಮಗ್ರ ಸಾಹಿತ್ಯ' – ಸಂಪುಟ ೪, ಭಾಗ ೨ –'ಸಾಹಿತ್ಯ ವಿಮರ್ಶೆ' : ಪುಟ ೨೧೦

–ಮುಂದುವರೆಯುವುದು

**Printed and published by** : B.R.Ravindranath on behalf of the BMSRI SMARAKA PRATISHTANA, B.M.Sri Pratishtana Road, (3rd Main Road) NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10 . and published at BMSRI SMARAKA PRATISHTANA, B.M.Sri Pratishtana Road, 3rd Main Road, NR Colony, Bangalore - 560019 Editor : **B.R.Ravindranath**

**ಅಚ್ಚಾದ ಪುಸ್ತಕ**

ಶ್ರೀಮತಿ/ಶ್ರೀ.................................................................................

.................................................................................

.................................................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಪ್ರತಿಷ್ಠಾನದ ರಸ್ತೆ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೪೭೭